

# ಕರ್ನಾಟಕ
# ಸ್ಕೌಟ್ ಮತ್ತು ಗೈಡ್

ವಾರ್ತಾ ಪತ್ರಿಕೆ

# KARNATAKA SCOUT & GUIDE

*News Magazine*

VOL. - 4 OCTOBER - 2004 No. - 9




A.P.J. Abdul Kalam, His Excellency the President of India Presenting
e National Best Teacher Award Sri. B.V. Shagri Thaya, Headmaster,
dya Bodhini High School, Balila & Asst. Dist. Commissioner (scouts)
ya Tq. D.K. Dist. on 5th Sept, 2004 at Vignan Bhavan, New Delhi.



Sri. V.R. Patel, I.A.S. Commissioner for Public Instruction, Govt. of Karnataka, releasing a BOOK ON "CUBBING" on 11th Oct. 2004 at Basant Park. Sri. Go.Ru. Channabasappa, Chairman, Publication Committee, Sri. Kondajji B. Shanmukhappa, State Chief Commissioner, Smt. M.G. Bopaiah, S. C. (Guides) & Sri. N. Chandrashekar A.S.C.(Scouts) are also seen.



Sri. M.S. Ravishankar I.A.S. Deputy Commissioner,
Davanagere Dist. Inaugurating the State Level
ining Courses on 06-10-2004 at Kondajji Campus




Scouts & Guides participating in the World Heart Day programme held in front of Vidhanasoudha on 26-09-2004. Organised by Cordilogical Society of India Karnataka Chapter.




## ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

### 87 ವರ್ಷಗಳ ಪರಿಪೂರ್ಣ ಸೇವೆಯಲ್ಲಿ

## 1917 - 2004

# HOSPITALS SHOULD NOT BE BREEDING CENTRES OF DISEASES



Hazards of unclean hospitals are many. Often they go unnoticed. Infectious diseases lurk right in the environs of healthcare centres. Pollution caused by unscientic disposal of *Bio-medical wastes* can be life-threatening.

*Bio-medical wastes* are accumulated in several forms: microbiological waste, animal waste, waste sharps like needles, syringes, discarded medicines and drugs, solid waste like dressings, bandages, bedding, plaster, IV tubes, liquid wastes like blood, body fluids etc. These solid and liquid wastes invariably find their way into atmosphere and result in polluting air, water and soil. They can be extremely toxic as they consist of infections micro organisms and carcinogenic substances.

## EFFECTS ON OUR HEALTH AND WELL BEING

The emmissions and disposal of waste from Hospitals, Nursing Homes etc contain dangerous infections causing dreaded diseases like AIDS/Hepatitis/TB/Cancer/ Cholera/ Malaria/Skin diseases etc.

## ARE THERE ANY RULES TO CONTROL ?

According to the Bio-Medical Waste (Management and Handling) Rules 1998

+ Institutions generating Bio-Medical Waste should take all steps to ensure that such waste in handled without any adverse effect to human health and environment.
+ Bio-Medical waste shall not be mixed with any other waste and shall be segregated into containers/bags at the point of generation.
+ The containers shall be labelled as per rules
+ Waste shall only be transported in authorised vehicles
+ No un-treated waste shall be stored beyond 48 yours

Failure to comply with these rules shall be punishable under Section 15 of the Environment Pollution Act 1986 with penal action/imprisonment or fine of Rs. 1 lakh or both or closure of the unit.

## WHAT CAN YOU DO?

***as an occupier***

+ Segregate the waste at the point of generation
+ Label containers promptly
+ Use colored bins for storing wastes
+ Collect, transport, treat and dispose off bio-medical waste in a scientific method
+ Destroy and disinfect the sharp before disposal
+ Handle with protective wear
+ Do not mix the infectious waste with general waste
+ Obtain authorization under Rules from Karnataka Pollution Control Board

***as general public***

Demand safe and hygienic service from doctors

Demand Sterilized or disinfected surgical material

Ensure that bio-medical wastes are not mixed with any domestic wastes or

thrown into municipal/corporation bins

Prevent rag pickers from coming in contract with the wastes and animals from consuming them

Don't spill waste

Keep toilets clean, use spitoons

Help in keeping hospitals clean and minimise waste




**KARNATAKA STATE POLLUTION CONTROL BOARD**

4 & 5th Floor, "Parisara Bhavan", # 49, Church Street, Bangalore - 560 001.

Tel: 25586520, Fax: 080-25586321, Grams: Jalaraksha



ಕರ್ನಾಟಕ

# ಸ್ಕೌಟ್ ಮತ್ತು ಗೈಡ್

ವಾರ್ತಾ ಪತ್ರಿಕೆ

KARNATAKA SCOUT & GUIDE

*News Magazine*

**Vol - 4** **October - 2004** **No.9**



## ಪರಿವಿಡಿ



**We want that education by which character is formed, strength of mind is increased, the intellect is expanded, and by which one can stand on one's own feet"**

**- Swami Vivekananda**

# ರಾಜ್ಯ ಮುಖ್ಯಆಯುಕ್ತರ ನುಡಿ

**ಮಾನ್ಯರೇ,**

ಹಿಂದಿನ ಸಂಚಿಕೆಯಲ್ಲಿ ರಾಜ್ಯ ಸಂಸ್ಥೆ ಅಕ್ಟೋಬರ್, ನವಂಬರ್, ಡಿಸೆಂಬರ್ ತಿಂಗಳುಗಳಲ್ಲಿ ಏರ್ಪಡಿಸಿರುವ ರಾಜ್ಯಮಟ್ಟದ ವಿವಿಧ ಶಿಬಿರ ಹಾಗೂ ಕಾರ್ಯಕ್ರಮಗಳ ಬಗ್ಗೆ ತಮ್ಮ ಗಮನಕ್ಕೆ ತಂದಿದ್ದೆ. ಬೆಸೆಂಟ್ ಪಾರ್ಕ್ ಹಾಗೂ ಕೊಂಡಜ್ಜಿ ಶಿಬಿರಗಳಲ್ಲಿ ಅಕ್ಟೋಬರ್ 3 ರಿಂದ 12 ರವರೆವಿಗೆ ಏಕಕಾಲದಲ್ಲಿ ಜರುಗಿದ ವಿವಿಧ ಶಿಬಿರಗಳಿಗೆ ರಾಜ್ಯದ ಎಲ್ಲಾ ಜಿಲ್ಲೆಗಳಿಂದ ಸ್ಕೌಟ್-ಗೈಡ್-ಕಬ್-ಫ್ಲಾಕ್-ರೋವರ್ ಹಾಗೂ ವೃಕ್ಷಮಣಿಧಾರಿಗಳ ತರಬೇತಿಗಳಿಗೆ ಒಟ್ಟು 415 ಅಭ್ಯರ್ಥಿಗಳು ಪಾಲ್ಗೊಂಡಿದ್ದು ಸಂತಸದ ವಿಷಯವಾಗಿದೆ. ಇತ್ತೀಚಿಗೆ ಜರುಗಿದ ಶಿಬಿರಗಳಲ್ಲಿ ಹೆಚ್ಚಿನ ಅಭ್ಯರ್ಥಿಗಳು ಏಕಕಾಲಕ್ಕೆ ತರಬೇತಿ ಪಡೆದಿದ್ದು, ಜಿಲ್ಲೆಗಳಲ್ಲಿ ಹಾಗೂ ರಾಜ್ಯಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವ ಚಳವಳಿಯ ಎಲ್ಲಾ ಸಂಘಟನಾ ನಾಯಕರುಗಳಿಗೆ ನನ್ನ ಅಭಿನಂದನೆಗಳು. ಶಿಬಿರಗಳ ಯಶಸ್ಸಿಗೆ ಸಹಕರಿಸಿದ ಸ್ಥಳೀಯ ಹಾಗೂ ಜಿಲ್ಲೆಗಳ ಪದಾಧಿಕಾರಿಗಳಿಗೆ ನನ್ನ ನಮನಗಳು.

ಇದೇ ಸಮಯದಲ್ಲಿ ಕೊಡಗು, ಬೆಂಗಳೂರು ದಕ್ಷಿಣ ಹಾಗೂ ಉಡುಪಿ ಜಿಲ್ಲೆಗಳಲ್ಲಿ ಜರುಗಿದ ತರಬೇತಿ ಶಿಬಿರಗಳಲ್ಲಿ ಅನುಕ್ರಮವಾಗಿ 77 ಹಾಗೂ 54 ಹಾಗೂ 70 ಅಭ್ಯರ್ಥಿಗಳು ಭಾಗವಹಿಸಿರುತ್ತಾರೆ. ಮೂರೂ ಜಿಲ್ಲೆಗಳ ಪದಾಧಿಕಾರಿಗಳನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ದಿನಾಂಕ 4 ಅಕ್ಟೋಬರ್‌ನಿಂದ 8ರವರೆವಿಗೆ ಜರುಗಿದ ರಾಜ್ಯಮಟ್ಟದ ಎರಡನೇ ಮುಕ್ತದಳಗಳ ಕ್ಯಾಂಪೂರಿಯಲ್ಲಿ ರಾಜ್ಯದ ಎಂಟು ಜಿಲ್ಲೆಗಳಂದ 370 ಕ್ಕೂ ಹೆಚ್ಚಿನ ಕಬ್-ಬುಲ್ ಬುಲ್‌ಗಳು - ಸ್ಕೌಟ್ - ಗೈಡ್‌ಗಳು, ರೋವರ್ - ರೇಂಜರ್‌ಗಳು ಸ್ವಯಂ ಪ್ರೇರಿತರಾಗಿ ಭಾಗವಹಿಸಿ - ಚಳವಳಿಯ ಅಂತಃಸತ್ವದ ಬಗ್ಗೆ ಪ್ರಮಾಣೀಕರಿಸಿದ್ದಾರೆ. ಬಹುದೂರದ ಆನೇಕಲ್ - ಕೋಲಾರ - ಬೆಂಗಳೂರು ಹಾಗೂ ಬೇರೆ ಬೇರೆ ಜಿಲ್ಲೆಗಳಿಂದ ಆಗಮಿಸಿದ್ದ ಪುಟಾಣಿ ಕಬ್-ಬುಲ್ ಬುಲ್‌ಗಳ ಮನೋಸ್ಥೈರ್ಯ ಹಾಗೂ ಉತ್ಸಾಹದ ಬುಗ್ಗೆಯನ್ನು ನೋಡಿ ಹೆಮ್ಮೆ ಪಟ್ಟಿದ್ದೇನೆ - ಹರ್ಷವ್ಯಕ್ತಪಡಿಸಿದ್ದೇನೆ.

ಭಟ್ಕಳ ನಗರದ ಸಾರ್ವಜನಿಕರು - ಪುರಸಭೆ - ಹಾಗೂ ಚಳವಳಿಯ ಅಭಿಮಾನಿಗಳು ಹಾಗೂ ರಾಷ್ಟ್ರಪತಿ ಸ್ಕೌಟ್ ಹಾಗೂ ಹಲವು ಹೊರದೇಶಗಳಿಗೆ ಹೋಗಿ ಚಳವಳಿಯ ಭ್ರಾತೃತ್ವವನ್ನು ಮೈಗೂಡಿಸಿಕೊಂಡಿರುವ ಯುವನಾಯಕ - ಸಹೋದರ ಶ್ರೀ ಅಬ್ದುಲ್ ಮಜೀದ್ ಕೋಲಲರವರ ಕತೃತ್ವಶಕ್ತಿ ಮೆಚ್ಚುವಂತಾದ್ದು. ಅವರೊಂದಿಗೆ ಕ್ಯಾಂಪೂರಿಗೆ ಸಹಕರಿಸಿದ ಉತ್ತರ ಕನ್ನಡ ಜಿಲ್ಲೆ ಹಾಗೂ ಭಟ್ಕಳ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳಿಗೆ ಅಭಿನಂದನೆಗಳು. ರಾಜ್ಯ ಮಟ್ಟದ ಮುಕ್ತದಳಗಳ ಯಶಸ್ಸಿಗೆ ಸಹಕರಿಸಿದ ಶ್ರೀ ಪಿ.ಎಸ್. ನಾಗರಾಜ ಗುಪ್ತ ಶ್ರೀ ಎ.ಎನ್. ನರೇಂದ್ರ ಕುಮಾರ್, ಶ್ರೀ ಪಿ.ಎನ್. ಕೃಷ್ಣ ಪ್ರಸಾದ್ ಹಾಗೂ ಇತರರಿಗೆ ಅಭಿನಂದನೆಗಳು. ಮುಂದಿನ ವರ್ಷಗಳಲ್ಲಿ ಮುಕ್ತದಳಗಳ ಕಾರ್ಯಕ್ರಮಗಳನ್ನು ಇನ್ನೂ ಯಶಸ್ವಿಯಾಗಿ ಜರುಗಿಸಲು ಎಲ್ಲಾ ಹಂತಗಳಲ್ಲೂ ಕಾರ್ಯ ಪ್ರವೃತ್ತರಾಗೋಣ ಎಂದು ಆಶಿಸುತ್ತೇನೆ.

ರಾಷ್ಟ್ರೀಯ ಸಂಸ್ಥೆಯವರು, ದಕ್ಷಿಣ ರಾಜ್ಯಗಳಿಗೆ ಏರ್ಪಡಿಸಿದ್ದ "ರಾಷ್ಟ್ರಪತಿ ರೋವರ್ಸ್ ಟೆಸ್ಟಿಂಗ್ ಕ್ಯಾಂಪ್" "ಏರ್ ಸ್ಕೌಟ್-ಗೈಡ್ ಬೇಸಿಕ್ ಶಿಬಿರ" ಹಾಗೂ "ಡಿಸಾಸ್ಟರ್ ಸಂದರ್ಭಗಳಲ್ಲಿ ಅನುಸರಿಸಬೇಕಾದ ಕ್ರಮಗಳ ಶಿಬಿರಗಳು" ಸಹ ಯಶಸ್ವಿಯಾಗಿ ಜರುಗಿದವು. ಏರ್‌ಸ್ಕೌಟ್ - ಗೈಡ್ ಶಿಬಿರದ ಯಶಸ್ಸಿಗೆ ಸಹಕರಿಸಿದ ಹೆಚ್.ಎ.ಎಲ್. ಸಂಸ್ಥೆ ಹಾಗೂ ಹೆಚ್.ಎ.ಎಲ್ ರೋವರ್ ಕ್ರೂಗೆ ನನ್ನ ನಮನಗಳು. ದಕ್ಷಿಣದ ರಾಜ್ಯಗಳ ತರಬೇತುದಾರರಿಗೆ ಈ ತಿಂಗಳ ಕೊನೆಯಲ್ಲಿ ರಾಷ್ಟ್ರೀಯ ಪ್ರತಿಕ್ಷಣಕೇಂದ್ರ, ಪಚಮಡಿಯುವರು "ಬೆಸೆಂಟ್ ಪಾರ್ಕ್‌ನಲ್ಲಿ ಏರ್ಪಡಿಸಿರುವ" "ರೀ ಓರಿಯಂಟೇಷನ್" ಶಿಬಿರಕ್ಕೆ ಕರ್ನಾಟಕ - ತಮಿಳುನಾಡು - ಆಂಧ್ರಪ್ರದೇಶ - ಕೇರಳಗಳಿಂದ 100 ಶಿಬಿರಾರ್ಥಿಗಳು ಬರುವ ನಿರೀಕ್ಷೆ ಇದೆ. ತುಮಕೂರಿನಲ್ಲಿ ಅಕ್ಟೋಬರ್ 31 ರಂದು ರಾಜ್ಯಮಟ್ಟದ ಆಯುಕ್ತರು - ಕಾರ್ಯದರ್ಶಿಗಳು ಹಾಗೂ ಕೋಶಾಧಿಕಾರಿಗಳ ಸಮಾವೇಶ ಹಾಗೂ ರಾಜ್ಯ ಕಾರ್ಯಕಾರಿ ಮಂಡಳಿ ಸಭೆ ನಡೆಯಲು ಸಿದ್ಧತೆಗಳು ನಡೆದಿವೆ.

ಈ ತಿಂಗಳಲ್ಲಿ ದಾವಣಗೆರೆ ಜಿಲ್ಲಾ ಸಂಸ್ಥೆಯವರು ಕೊಂಡಜ್ಜಿ ತರಬೇತಿ ಕೇಂದ್ರದಲ್ಲಿ ಮೂಲಭೂತ ಹಾಗೂ ಮುಂದುವರೆದ ಸ್ಕೌಟ್-ಗೈಡ್ - ಕಬ್ - ಪ್ಲಾಕ್ ಶಿಬಿರಗಳನ್ನು ಏರ್ಪಡಿಸಿದ್ದಾರೆ. ಬೆಳಗಾಂ ಜಿಲ್ಲಾ ಸಂಸ್ಥೆಯವರು ನವಂಬರ್ ಮೊದಲ ವಾರದಲ್ಲಿ ವಿವಿಧ ಹಂತದ ತರಬೇತಿ ಶಿಬಿರಗಳನ್ನು ಹುಕ್ಕೇರಿಯಲ್ಲಿ ಜರುಗಿಸಲು ತಯಾರಿ ನಡೆಸುತ್ತಿದ್ದಾರೆ.

ಶಿವಮೊಗ್ಗ ಜಿಲ್ಲೆಯ "ಶೆಟ್ಟಿಹಳ್ಳಿ ವನ್ಯಜೀವಿ ಅರಣ್ಯಧಾಮದಲ್ಲಿ" ರೋವರ್ಸ್-ರೇಂಜರ್ಸ್‌ಗಳ ಅಡ್ವೆಂಚರ್ ಹಾಗೂ ಟ್ರೆಕಿಂಗ್ ಕಾರ್ಯಕ್ರಮ ನವಂಬರ್ 3 ರಿಂದ 7ರವರೆಗೆ ಯಶಸ್ವಿಯಾಗಿ ನಡೆಸಲು ಸಿದ್ಧತೆಗಳಾಗುತ್ತಿವೆ.

ಸೆಪ್ಟೆಂಬರ್ 5 ರಂದು ನವದೆಹಲಿಯಲ್ಲಿ ಜರುಗಿದ "ರಾಷ್ಟ್ರೀಯ ಶಿಕ್ಷಕರ ದಿನಾಚರಣೆ ಹಾಗೂ ಪ್ರಶಸ್ತಿ ವಿತರಣೆ" ಸಮಾರಂಭದಲ್ಲಿ ಕರ್ನಾಟಕದ ಮೂವರು ಸ್ಕೌಟ್-ಗೈಡ್ ಶಿಕ್ಷಕರಿಗೆ ಪ್ರಶಸ್ತಿ ದೊರೆತಿದ್ದು, ಚಳವಳಿಯ ಕ್ರಿಯಾಶೀಲತೆಗೆ ಮತ್ತೊಂದು ಗರಿ ಬಂದಂತಾಗಿದೆ. ದಾವಣಗೆರೆಯ ಸ್ಕೌಟ್ ಮಾಸ್ಟರ್ ಶ್ರೀ ಎ. ಶಿವಪ್ಪ, ರಾಯಚೂರಿನ ಸಹಾಯಕ ಜಿಲ್ಲಾ ಆಯುಕ್ತೆ ಶ್ರೀಮತಿ ದಾನಮ್ಮ ಹಾಗೂ ಮಂಗಳೂರು ಜಿಲ್ಲೆಯ ಶ್ರೀ ಬಿ.ವಿ. ಶಾಂಗ್ರಿತಾಯ ಇವರುಗಳು ಪ್ರಶಸ್ತಿ ಹಾಗೂ ಗೌರವವನ್ನು ರಾಷ್ಟ್ರಾಧ್ಯಕ್ಷರಾದ ಗೌರವಾನ್ವಿತ ಭಾರತರತ್ನ ಡಾ.ಎ.ಪಿ.ಜೆ. ಅಬ್ದುಲ್ ಕಲಾಂ ಅವರಿಂದ ಪಡೆದು ಸ್ಕೌಟ್-ಗೈಡ್ ಚಳವಳಿಗೆ, ಸೇವೆ ಸಲ್ಲಿಸುತ್ತಿರುವ ಶಿಕ್ಷಣ ಇಲಾಖೆಗೆ - ತಮ್ಮ ವೃತ್ತಿಗೆ ಹೆಚ್ಚಿನ ಗೌರವ - ಆದರಗಳನ್ನು ಗಳಿಸುವಲ್ಲಿ ಯಶಸ್ವಿಯಾಗಿದ್ದಾರೆ. ಇವರೆಲ್ಲರಿಗೂ ಕರ್ನಾಟಕದ ಎಲ್ಲಾ ಸ್ಕೌಟ್-ಗೈಡ್‌ಗಳ ಪರವಾಗಿ ಹೃತ್ಪೂರ್ವಕ ಅಭಿನಂದನೆಗಳು.

ಈ ತಿಂಗಳ 5 ರಿಂದ 10 ರವರೆಗೆ ತುಮಕೂರು, ಚಿತ್ರದುರ್ಗ, ದಾವಣಗೆರೆ, ಹಾವೇರಿ, ಉತ್ತರ ಕನ್ನಡ, ಶಿವಮೊಗ್ಗ, ಭಟ್ಕಳ, ಬೆಸಂಟ್‌ಪಾರ್ಕ್, ಕೊಂಡಜ್ಜಿ ಶಿಬಿರಗಳಲ್ಲಿ ತರಬೇತಿ ಪಡೆಯುತ್ತಿದ್ದ 415 ಶಿಬಿರಾರ್ಥಿಗಳನ್ನು ಹಾಗೂ 500ಕ್ಕೂ ಹೆಚ್ಚಿನ ಕಬ್-ಬುಲ್ ಬುಲ್‌ಗಳು, ಸ್ಕೌಟ್ಸ್-ಗೈಡ್ಸ್‌ಗಳು, ರೋವರ್ - ರೇಂಜರ್ಸ್‌ಗಳನ್ನು ಮುಖತಃ ಭೇಟಿ ಮಾಡಿ ಚಳವಳಿಯ ಮುನ್ನಡೆಗೆ ನೆರವನ್ನು ಕೋರಿದ್ದೇನೆ. ಅಲ್ಲದೆ ಮೇಲ್ಕಂಡ ಜಿಲ್ಲೆಗಳ ಪದಾಧಿಕಾರಿಗಳೊಂದಿಗೆ ಚಳವಳಿಯ ಬಗ್ಗೆ ಚರ್ಚಿಸಿದಲ್ಲದೆ, ಜಿಲ್ಲಾಧಿಕಾರಿಗಳು ಜಿಲ್ಲಾ ಪಂಚಾಯಿತ್ತಿ ಮುಖ್ಯನಿರ್ವಹಣಾಧಿಕಾರಿ ಹಾಗೂ ಅಧ್ಯಕ್ಷ-ಉಪಾಧ್ಯಕ್ಷರನ್ನು ಭೇಟಿ ಮಾಡಿ ಚಳವಳಿಗೆ ಸಹಾಯ ಕೋರಿದ್ದೇನೆ.

ಶಿವಮೊಗ್ಗದಲ್ಲಿದ್ದಾಗ ಕುವೆಂಪು ವಿಶ್ವವಿದ್ಯಾಲಯದ ಕುಲಪತಿ ಡಾ. ಕೆ. ಚಿದಾನಂದ ಗೌಡರನ್ನು ಜಿಲ್ಲೆಯ ಪದಾಧಿಕಾರಿಗಳೊಂದಿಗೆ ಭೇಟಿ ಮಾಡಿ ವಿಶ್ವವಿದ್ಯಾಲಯದ ಆಡಳಿತಕ್ಕೊಳಪಟ್ಟಿರುವ ಕಾಲೇಜುಗಳಲ್ಲಿ ರೋವರ್ಸ್ - ರೇಂಜರ್ಸ್ ಘಟಕಗಳನ್ನು ಸ್ಥಾಪಿಸಲು ಹಾಗೂ ಕಾಲೇಜುಗಳ ಉಪನ್ಯಾಸಕರಿಗೆ "ರೋವರ್ ರೇಂಜರ್ ಮೂಲ ತರಬೇತಿ" ನೀಡಲು ಎಲ್ಲಾ ಸಹಾಯವನ್ನು ಒದಗಿಸಿಕೊಡಬೇಕೆಂದು ಕೋರಿದ್ದೇನೆ. ಮಾನ್ಯ ಕುಲಪತಿಗಳು ಚಳವಳಿಯ ವಿವರಗಳನ್ನು ಪಡೆದುದಲ್ಲದೆ ರೋವರ್ ರೇಂಜರ್ ಘಟಕಗಳನ್ನು ಕಾಲೇಜುಗಳಲ್ಲಿ ಪ್ರಾರಂಭಿಸಲು ಕ್ರಮ ಕೈಗೊಳ್ಳುವುದಾಗಿ ಭರವಸೆ ನೀಡಿದ್ದಾರೆ. ನಿಮ್ಮ ಜಿಲ್ಲೆಗಳಲ್ಲಿ ಜರುಗಲಿರುವ ತರಬೇತಿ ಶಿಬಿರಗಳಿಗೆ ಹಾಜರಾಗಿ - ಅಭ್ಯರ್ಥಿಗಳನ್ನು ಭೇಟಿಮಾಡಲು ನಿರೀಕ್ಷಿಸುತ್ತಿದ್ದೇನೆ. ನಾವುಗಳು ಈ ದಿಸೆಯಲ್ಲಿ ಕಾರ್ಯಪ್ರವೃತ್ತರಾಗೋಣ ಎಂದು ಆಶಿಸುತ್ತೇನೆ.

ಯಾವ ಜಿಲ್ಲೆಗಳಲ್ಲಿ ಈ ವರ್ಷ ತರಬೇತಿ ಶಿಬಿರಗಳು ಇದುವರೆವಿಗೂ ನಡೆದಿಲ್ಲವೋ, ಆ ಜಿಲ್ಲೆಯ ಪದಾಧಿಕಾರಿಗಳಲ್ಲಿ ನನ್ನ ಕೋರಿಕೆ - ತಕ್ಷಣ ತರಬೇತಿ ಶಿಬಿರಗಳನ್ನು ಯೋಜಿಸಿ ಹೆಚ್ಚಿನ ಸಂಖ್ಯೆಯಲ್ಲಿ ಶಿಕ್ಷಕ / ಶಿಕ್ಷಕಿಯರಿಗೆ ಮೂಲ ತರಬೇತಿ ಶಿಬಿರವನ್ನು ನೀಡಿ - ಘಟಕಗಳನ್ನು ಸ್ಥಾಪಿಸುವ ಮೂಲಕ ಜಿಲ್ಲೆಯಲ್ಲಿ ಚಳುವಳಿಯ ಬೆಳವಣಿಗೆ ಮಾಡಿ ಕೊಡಬೇಕೆಂದು ಪ್ರಾರ್ಥಿಸುತ್ತೇನೆ. ಮುಂದಿನ ಮಾರ್ಚ್ ವೇಳೆಗೆ ದಳಗಳನ್ನು ಹೆಚ್ಚಿಸಿ - ಚಳವಳಿಯನ್ನು ಹೆಚ್ಚಿನ ಶಾಲೆಗಳಲ್ಲಿ ಹರಡುವ ಹಂಬಲ ನಮ್ಮದಾಗಿದೆ. ನಾವೆಲ್ಲಾ ಹೆಚ್ಚಿನ ಶ್ರಮವಹಿಸಿ ಕಾರ್ಯನಿರ್ವಹಿಸೋಣ ಎಂದು ಆಶಿಸುತ್ತೇನೆ.

ತಮ್ಮ ವಿಶ್ವಾಸಿ

ಕೊ.ಬ. ಷಣ್ಮುಖಪ್ಪ

(ಕೊಂಡಜ್ಜಿ ಬ. ಷಣ್ಮುಖಪ್ಪ)

## ಬೆಸೆಂಟ್ ಪಾರ್ಕ್ ಮತ್ತು ಕೊಂಡಜ್ಜಿ ತರಬೇತಿ ಕೇಂದ್ರಗಳಲ್ಲಿ ರಾಜ್ಯ ಮಟ್ಟದ ತರಬೇತಿ ಶಿಬಿರಗಳು:

ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರದಲ್ಲಿ ದಿ. 3.10.2004 ರಿಂದ ದಿ.12.10.2004 ರವರೆಗೆ ಜರುಗಿದ ವಿವಿಧ ತರಬೇತಿ ಶಿಬಿರಗಳ ವಿವರಗಳು.

**ಸ್ಕೌಟ್ / ಗೈಡ್ ವಿಭಾಗ:**

| ತರಬೇತಿ ಶಿಬಿರಗಳ ವಿವರ | ದಿನಾಂಕ - ವರೆಗೆ | ಶಿಬಿರಾರ್ಥಿಗಳ ಸಂಖ್ಯೆ | ನಾಯಕರು |
|---|---|---|---|
| 1. ಹಿಮಾಲಯ ವೃಕ್ಷಮಣಿ ತರಬೇತಿ ಶಿಬಿರ (ಸ್ಕೌಟ್) | 3.10.2004 -12.10.2004 | 24 | ಶ್ರೀ ನಾರಾಯಣ ಶೆಟ್ಟಿ LT(S) |
| 2. ಮುಂದುವರೆದ ತರಬೇತಿ ಶಿಬಿರ (ಸ್ಕೌಟ್) | 5.10.2004-12.10.2004 | 36 | ಶ್ರೀ ನಾಗೇಶ್ ಶಿವಪೂರ್ ALT(S) |
| 3. ಮುಂದುವರೆದ ತರಬೇತಿ ಶಿಬಿರ (ಸ್ಕೌಟ್) | 5.10.2004-12.10.2004 | 36 | ಶ್ರೀ ಜಯರಾಜಭೂಸದ್ ALT(S) |
| 4. ಮುಂದುವರೆದ ತರಬೇತಿ ಶಿಬಿರ (ರೋವರ್ಸ್) | 5.10.2004-12.10.2004 | 16 | ಶ್ರೀ ಎ.ಎಮ್. ಶಂಕರ್ LT(R) |
| 5. ಮುಂದುವರೆದ ತರಬೇತಿ ಶಿಬಿರ (ಕಬ್ಸ್) | 5.10.2004-12.10.2004 | 12 | ಶ್ರೀಮತಿ ವಿ. ಸುರಭಿ LT(C) |
| 6. ಮುಂದುವರೆದ ತರಬೇತಿ ಶಿಬಿರ (ಗೈಡ್ಸ್) | 3.10.2004-9.12.2004 | 22 | ಶ್ರೀಮತಿ ಕೆ.ಲೀಲಾ LT(G) |



ಶ್ರೀ ಎಂ.ಎಸ್. ರವಿಶಂಕರ್ ಭಾ.ಆ.ಸೇ., ದಾವಣಗೆರೆ ಜಿಲ್ಲಾಧಿಕಾರಿಗಳು ಇವರನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಸ್ವಾಗತಿಸುತ್ತಿರುವುದು.

ಈ ಮೇಲ್ಕಂಡ ಶಿಬಿರಗಳಿಗೆ 17 ಜಿಲ್ಲೆಗಳಿಂದ 145 ಶಿಬಿರಾರ್ಥಿಗಳು ಹಾಗೂ 20 ಬೋಧಕವರ್ಗ ಹಾಗೂ ಸಿಬ್ಬಂದಿ ಭಾಗವಹಿಸಿದ್ದರು.

ದಿ. 6.10.2004ರಂದು ಮೇಲ್ಕಂಡ ಶಿಬಿರಗಳನ್ನು ದಾವಣಗೆರೆ ಜಿಲ್ಲಾಧಿಕಾರಿಗಳಾದ ಶ್ರೀ ಎಂ.ಎಸ್. ರವಿಶಂಕರ್, ಭಾ.ಆ.ಸೇ. ಇವರು ಉದ್ಘಾಟಿಸಿ ಮಾತನಾಡುತ್ತಾ ರಾಜ್ಯ ಮಟ್ಟದ ಜಾಂಬೋರೇಟ್‌ನ್ನು ದಾವಣಗೆರೆಯಲ್ಲಿ ನಡೆಸಲು ಎಲ್ಲ ರೀತಿಯ ಸಹಕಾರ ನೀಡುವುದಾಗಿ ತಿಳಿಸಿದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಅಧ್ಯಕ್ಷತೆ ವಹಿಸಿದ್ದರು. ಸಮಾರಂಭದಲ್ಲಿ ಶ್ರೀ ಮಹಮ್ಮದ್‌ವಾಸಿಲ್, ಕೇಂದ್ರ ಸ್ಥಾನಿಕ ಆಯುಕ್ತರು, ಶ್ರೀ ಜಂಬಗಿ ಶರಣಪ್ಪ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಎಂ. ಎ. ಚಲ್ಲಯ್ಯ ಕೇಂದ್ರ ಸ್ಥಾನಿಕ ಆಯುಕ್ತರು, ಸಾರ್ವಜನಿಕ ಸಂಪರ್ಕ ಮತ್ತು ಜಿಲ್ಲಾ ಪದಾಧಿಕಾರಿಗಳು ಹಾಗೂ ಕೊಂಡಜ್ಜಿ ಗ್ರಾಮಸ್ಥರು ಹಾಜರಿದ್ದರು.

ದಿ. 9.10.2004 ರಂದು ಭವ್ಯ ಶಿಬಿರಾಗ್ನಿಯಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಭಾಗವಹಿಸಿದ್ದರು.

**ರಾಜ್ಯ ತರಪೇತಿ ಕೇಂದ್ರ ಬೆಸೆಂಟ್ ಪಾರ್ಕ್ ದೊಡ್ಡಬಳ್ಳಾಪುರದಲ್ಲಿ ದಿ. ೩.೧೦.೨೦೦೪ ರಿಂದ ೧೨.೧೦.೨೦೦೪ ರವರೆಗೆ ಜರುಗಿದ ರಾಜ್ಯ ಮಟ್ಟದ ವಿವಿಧ ತರಬೇತಿಗಳ ವಿವರಗಳು.**

## ಸ್ಕೌಟ್ / ಗೈಡ್ ವಿಭಾಗಗಳು :

| ತರಬೇತಿ ಶಿಬಿರಗಳ ವಿವರ | ದಿನಾಂಕ - ವರೆಗೆ | ಶಿಬಿರಾರ್ಥಿಗಳ ಸಂಖ್ಯೆ | ನಾಯಕರು |
|---|---|---|---|
| 1. ಹಿಮಾಲಯ ವೃಕ್ಷಮಣಿ ತರಬೇತಿ ಶಿಬಿರ (ಸ್ಕೌಟ್) | 3.10.2004 -12.10.2004 | 33 | ಶ್ರೀ ಎನ್. ಶ್ರೀನಿವಾಸನ್ LT(S) |
| 2. ಮುಂದುವರೆದ ತರಬೇತಿ ಶಿಬಿರ (ಸ್ಕೌಟ್) | 5.10.2004-12.10.2004 | 27 | ಶ್ರೀ ಕೆ.ಜಿ. ಗೋಪಾಲಕೃಷ್ಣ ALT(S) |
| 3. ಮುಂದುವರೆದ ತರಬೇತಿ ಶಿಬಿರ (ಸ್ಕೌಟ್) | 5.10.2004-12.10.2004 | 27 | ಶ್ರೀ ಷರಾಫ್ ಮಾದಪ್ಪ ALT(S) |
| 4. ಮೂಲ ತರಬೇತಿ ಶಿಬಿರ (ಕಬ್) | 3.10.2004-12.10.2004 | 31 | ಶ್ರೀ ಯು.ಎಸ್.ರಾಜಗೋಪಾಲಚಾರ್ ALT(G) |
| 5. ಮುಂದುವರೆದ ತರಬೇತಿ ಶಿಬಿರ (ಕಬ್ಸ್) | 5.10.2004-12.10.2004 | 26 | ಶ್ರೀಮತಿ ಜ್ಯೂಲಿಯಾನಾ ಲಸರಾಡೋ ALT(C) |
| 6. ಮುಂದುವರೆದ ತರಬೇತಿ ಶಿಬಿರ (ಗೈಡ್ಸ್) | 3.10.2004-9.12.2004 | 35 | ಶ್ರೀಮತಿ ಸುಶೀಲಾ ಗೋಪಾಲ್ ALT(G) |
| 7. ಹಿಮಾಲಯ ವೃಕ್ಷಮಣಿ ತರಬೇತಿ ಶಿಬಿರ (ಗೈಡ್ಸ್) | 3.10.2004-9.10.2004 | 38 | ಶ್ರೀಮತಿ ಜಾನಕಿ ವೇಣುಗೋಪಾಲ್ LT(G) |
| 8. ಮುಂದುವರೆದ ತರಬೇತಿ ಶಿಬಿರ (ಫ್ಲಾಕ್) | 3.10.2004-9.10.2004 | 16 | ಶ್ರೀಮತಿ ನಿರ್ಮಲಾ ಕಲಶೆಟ್ಟಿ LT(B) |
| 9. ಹಿಮಾಲಯ ವೃಕ್ಷಮಣಿ ತರಬೇತಿ ಶಿಬಿರ (ಫ್ಲಾಕ್) | 3.10.2004-9.10.2004 | 21 | ಶ್ರೀಮತಿ ಬಿ. ರೇವತಿ LT(B) |

ಈ ಮೇಲ್ಕಂಡ ಶಿಬಿರಗಳಿಗೆ 23 ಜಿಲ್ಲೆಗಳಿಂದ 254 ಶಿಬಿರಾರ್ಥಿಗಳು ಹಾಗೂ 30 ಬೋಧಕ ವರ್ಗ ಹಾಗೂ ಸಿಬ್ಬಂದಿ ಭಾಗವಹಿಸಿದ್ದರು.



ದಿ. 4.10.2004 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ .ಬ. ಷಣ್ಮುಖಪ್ಪನವರು ಶಿಬಿರಗಳನ್ನು ಉದ್ಘಾಟಿಸಿದರು. ದಿ. 11.10.2004 ರಂದು, ಮೇಲ್ಕಂಡ ಶಿಬಿರಗಳ ಸಮಾರೋಪ ಸಮಾರಂಭದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಾದ ಶ್ರೀ ವಿ. ಆರ್. ಪಟೇಲ್ ಭಾ.ಆ.ಸೇ ಇವರು ಮುಖ್ಯ ಅತಿಥಿಗಳಾಗಿ ಮಾತನಾಡುತ್ತಾ ಬಾಲಕ / ಬಾಲಕಿಯರ ಸಮವಸ್ತ್ರದ ಬಗ್ಗೆ ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ನಿಧಿಯಿಂದ ನೀಡುವುದಾಗಿಯೂ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಬೆಳವಣಿಗೆಗೆ ಎಲ್ಲ ರೀತಿಯ ಪ್ರೋತ್ಸಾಹ ನೀಡುವುದಾಗಿ ಭರವಸೆ ನೀಡಿದಲ್ಲದೆ - ಚಳವಳಿಯು ಅಂತಸತ್ವ ಹೊಂದಿರುವುದರಿಂದ ತನ್ನ ಗುರುತುಗಳನ್ನು ಎಲ್ಲಾ ಶಾಲೆಗಳಿಗೆ ಹೆಚ್ಚಿಸುವುದು ಹೆಚ್ಚು ಕಷ್ಟದಾಯಕವಾಗದು ಎಂದು ಅಭಿಪ್ರಾಯ ಪಟ್ಟುದಲ್ಲದೆ - ಶಿಕ್ಷಣ ಇಲಾಖೆ ಇಂತಹ ಉತ್ತಮ ಮೌಲ್ಯಗಳುಳ್ಳ ಚಳವಳಿಯ ಬೆಳವಣಿಗೆಗೆ ತೊಡಗಿಸಿಕೊಳ್ಳುವುದು ಅತ್ಯಂತ ಅವಶ್ಯಕ ಎಂದು ತಿಳಿಸಿದರು.

ಸಮಾರಂಭದಲ್ಲಿ ಶ್ರೀ ಆರ್. ಚಂದ್ರಶೇಖರನ್, ಕೇಂದ್ರ ಸ್ಥಾನಿಕ ಆಯುಕ್ತರು (ಪ್ರಕಟಣೆ), ಇವರು ಅನುವಾದಿಸಿದ "ಕಬ್ ಮಾಸ್ಟರುಗಳ ಕೈಪಿಡಿ" ಎಂಬ ಪುಸ್ತಕವನ್ನು ಮಾನ್ಯ ಆಯುಕ್ತರು ಬಿಡುಗಡೆ ಮಾಡಿ, ಶ್ರೀಯುತರನ್ನು ಸನ್ಮಾನಿಸಿದರು.



ಹಿರಿಯ ಸಾಹಿತಿಗಳು ಹಾಗೂ ಸಂಸ್ಥೆಯ ಪ್ರಕಟಣೆಗಳ ಸಮಿತಿಯ ಅಧ್ಯಕ್ಷರೂ ಆದ ಶ್ರೀ ಗೊ.ರು. ಚನ್ನಬಸಪ್ಪನವರು ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ, ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳಿಗೆ ಶಿಕ್ಷಣ ಇಲಾಖೆಯ ಸಂಪೂರ್ಣ ಸಹಕಾರ ಕೋರಿದರು.

ಸಮಾರಂಭದಲ್ಲಿ ಶ್ರೀ ಕೊಂಡಜ್ಜಿ .ಬ.ಷಣ್ಮುಖಪ್ಪ ರಾಜ್ಯ ಮುಖ್ಯ ಆಯುಕ್ತರು, ರಾಜ್ಯ ಗೈಡ್ಸ್ ಆಯುಕ್ತೆ ಶ್ರೀಮತಿ ಎಂ.ಜಿ. ಬೋಪಯ್ಯ, ರಾಜ್ಯ ಸಹಾಯಕ ಆಯುಕ್ತರಾದ ಶ್ರೀ.ಎನ್. ಚಂದ್ರಶೇಖರ್, ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಎಂ. ಎ. ಚಲ್ಲಯ್ಯ ಉಪಸ್ಥಿತರಿದ್ದರು.

ದಿ. 11.10.2004 ರಂದು ರಾತ್ರಿ ನಡೆದ ಭವ್ಯ ಶಿಬಿರಾಗ್ನಿಯನ್ನು ರಾಷ್ಟ್ರೀಯ ಸಂಸ್ಥೆಯ ದಕ್ಷಿಣ ವಲಯದ ಸಹಾಯಕ ನಿರ್ದೇಶಕಿ ಶ್ರೀಮತಿ ಸುಮನ್‌ಲತಾ ಉದ್ಘಾಟಿಸಿದರು.



ಭಾರತದ ಪ್ರತಿಯೊಂದು ಮನೆಯಲ್ಲೂ ಸ್ಕೌಟ್ ಮತ್ತು ಗೈಡ್‌ಗಳಂತಹ ಮಕ್ಕಳಿರಬೇಕೆಂದು ನಾನು ಅಪೇಕ್ಷಿಸುತ್ತೇನೆ.

- ಮಹಾತ್ಮ ಗಾಂಧಿ



● *GONE HOME* ●

*Eminent Scientist*

## *Dr. Raja Ramanna Passes Away*

Architect of India's first nuclear blast and eminent Scientist Dr. Raja Ramanna passed away in Mumbai on 24.9.2004. He had been suffering from intestinal problems. He was 79. He was one of the foremost brains involved in the Country's nuclear programme. He was also former chairman of the Atomic Energy Commission and Former Minister of State for Defence.

Dr. Ramanna did Karnataka proud when he led the team that made the country's nuclear device and exploded it at Pokhran in 1974. It came about thus: While on a visit to Bhabha Atomic Research Centre (BARC), Ms Indira Gandhi, then Prime Minister, gave verbal authorisation to the scientists to build a nuclear device they had designed. As the Director of BARC, Dr Ramanna led the team and worked closely with Defence Research and Development Organisation.

Dr. Raja Ramanna will be remembered for his academics as much as for his contribution for Science, of which the National Institute of Advanced Studies (NIAS) is a living testimony. Dr. Ramanna was the Founder-Director of this centre of excellence. NIAS was conceived and established by the vision and initiative of the late JRD Tata, who sought to create an institution which would conduct advanced research in multi-disciplinary areas.

## *1854 - 2004*

## *150 Years of Indian Lithographs*

150 years of Indian Lithographs October 2004 is a milestone in the saga of Indian Philately as it marks 150 years of Indian Postage Stamps.

It is now 150 years since the first prepaid postal stamp was out. "Penny Block" was the first postage stamp in the world and it was issued in England and was used on may 7, 1840.

**- Courtesy The Hindu, October 9, 2004**




# SCOUTING / GUIDING ON AIR

## *Jamboree-on-the AIR*

### 47th JOTA - 8th JOTI

The 47th Jamboree on the AIR (Radio Scouting) and the 8th world Scout Jamboree on the "internet 2004 was held on 16th and 17th October 2004 at the State Headuarters, Banglore. 200 Cubs, Bul Buls, Scouts, Guides and the Unit leaders participated in the international Event.

The Scouts and Guides from all over the World got in touch with their colleagues in other parts of the world on the "'Air Radio" frequency with the help of HAM RADIO Station. This is considered one of the largest annual event for the Scouts and Guides. The event is usually in the form of Physical Meetings, Camps or, meetings done on the Wireless with the call of "CQ Scout" on world frequencies. Lion K.M. Muniyappa,District Governor Inagurated the event at Chamundi Scout Group - premíses. Event Started at 12 Noon on 16-10-2004, Ended at midnight 17-10-2004.

# OBSERVANCE OF FLAG DAY - 7TH NOVEMBER 2004

The Bharat Scouts & Guides is a voluntary, educational movement to shape and build the character of young people through inculcating the values of self-discipline; social service and patriotism. The Scout Movement which was founded by Lord Baden Powell in 1907 is now spread in almost 216 countries. 153 countries are affiliated to WOSM and WAGGGS.

The Scout and Guide Movement came into existence in India almost within a couple years of being founded i.e. in 1909 and is today spread in all the civil states, union territories, 9 zonal railways, KVS and NVS with a total membership of over 36 lakhs Scouts & Guides and their Leaders. Scouts and Guides with the qualities of true citizenship ideologies render selfless services to develop the community and serve the needy people.

The Scouting movement in India is a self-supporting movement but enjoys good financial support of society, Union Govt. and State Govts.

7th November, 1950 is the day the Bharat Scouts and Guides came into existence after merging various different Scout organizations and the Girl Guide Association which were working seperately with a common spirit prior to independence. 7th November is being celebrated all over India as 'Flag Day' since the Golden Jubilee of the formation of the Bharat Scouts & Guides. The aim of celebrating it as a Flag Day is to spread the message of Scouting and Guiding in all the sections of the Society and the Government and collecting a nominal amount of Rs. 2/- per flag sticker as a token of your recognition and appreciation of the Movement. Scouts and Guides all over India will be approaching friends, neighbours and other fellow citizens, present Scout/Guide Flag sticker as a token of acclaiming you as strong supporter of the movement. Please accept the recognition and join the fleet of strong supporters of this largest and oldest voluntary youth movement in the country.

STATE SECRETARY

ಚಿಂತನ



# ಯೌವ್ವನ

- ಗೊ.ರು. ಚನ್ನಬಸಪ್ಪ

ಧೈರ್ಯ, ಸಾಹಸ, ಸಹವಾಸ, ಅಭ್ಯಾಸ, ಆತ್ಮವಿಶ್ವಾಸ ಮತ್ತು ಸ್ವಾತಂತ್ರ್ಯಗಳಿಗೆ ಒಂದು ಮೊತ್ತದ ಹೆಸರು ಯೌವ್ವನ. ಅಂದರೆ, ಯೌವ್ವನದಲ್ಲಿ ಇವೆಲ್ಲ ಇರುತ್ತವೆ ಮತ್ತು ಇರಬೇಕು ಎಂದರ್ಥ. ಮಾನವ ಜೀವನದ ಒಂದು ಮಹತ್ವದ ಹಂತ ಯೌವ್ವನ. ಎಳೆತನದ ಮುಗ್ಧತೆಯನ್ನು ದಾಟಿ, ಹಿರಿತನದ ಹೊಸ್ತಿಲಿನತ್ತ ನಡೆಯುವ ಬೆಲೆಬಾಳುವ ಸಮಯ. ಕಂಡು ಕೇಳಿದ್ದನ್ನೆಲ್ಲ ಪ್ರಶ್ನಿಸುವ, ಪರೀಕ್ಷಿಸುವ ಮತ್ತು ಪ್ರಯೋಗಿಸುವ ಹುಚ್ಚಿನ ಕಾಲ. ಒಪ್ಪಿಗೆಯಾದರೆ ಅಪ್ಪಿಕೊಳ್ಳುವ, ಹಿಡಿಸದಿದ್ದರೆ ಸಿಡಿದುಬೀಳುವ ಸಹಜ ಸಂದರ್ಭ.

ಯೌವ್ವನ ಅತ್ಯಂತ ಸೂಕ್ಷ್ಮ ಅವಧಿಯೂ ಹೌದು. ಅನ್ಯಾಯ, ಅಸಹ್ಯ, ಅಸಮತೆಗಳ ವಿರುದ್ಧ ಹೋರಾಡ ಬಯಸುವ ಈ ವಯಸ್ಸು, ಒಮ್ಮೊಮ್ಮೆ ಭಾವೋದ್ವೇಗದ ಭರದಲ್ಲಿ ಹಳಿತಪ್ಪಿ ತಾನೇ ಅಂತಹ ಅನ್ಯಾಯ ಅಸಹ್ಯಗಳಿಗೆ ಕಾರಣವಾಗಲೂಬಹುದು. ಆದ್ದರಿಂದ ಯೌವ್ವನವನ್ನು ಅತ್ಯಂತ ಜಾಗರೂಕತೆಯಿಂದ ಹದಗೊಳಿಸಬೇಕಾಗುತ್ತದೆ. ಹಾಗೆ ಹದಗೊಳಿಸಬಿಟ್ಟರೆ, ಯೌವ್ವನ ಹೂವಿಗೆ ಹೂವಾಗುತ್ತದೆ ಉಕ್ಕಿಗೆ ಉಕ್ಕಾಗುತ್ತದೆ !

ಯುವಜನಾಂಗ ಸಮಾಜದ ಅತ್ಯದ್ಭುತ ಸಂಪತ್ಸಾಧನ. ಯಾವಾಗ ? ಅವರ ಉತ್ಸಾಹ, ಉಪಕ್ರಮ ಮತ್ತು ಉತ್ಪಾದನ ಶಕ್ತಿಯನ್ನು ಸರಿಯಾಗಿ, ಸಕಾಲಿಕವಾಗಿ, ಸಮರ್ಥವಾಗಿ ಬಳಸಿಕೊಂಡಾಗ. ಯೌವ್ವನದ ಶಕ್ತಿ ಸಾಹಸಗಳು, ಆಸೆ-ಆಕಾಂಕ್ಷೆಗಳು ಒಂದು ಪ್ರವಾಹವಿದ್ದಂತೆ. ಯೋಗ್ಯ ಅಣೆಕಟ್ಟು ನಿರ್ಮಿಸಿ, ಸೂಕ್ತ ನಾಲೆಗಳಲ್ಲಿ ಹರಿಸದಿದ್ದರೆ ಈ ಪ್ರವಾಹ ಹುಚ್ಚೆದ್ದು ಹರಿಯುತ್ತದೆ; ತನ್ನ ಹಾದಿಯಲ್ಲಿ ಸಿಕ್ಕುದುದನ್ನೆಲ್ಲ ಕೊಚ್ಚಿಕೊಂಡು ಹೋಗಿಬಿಡುತ್ತದೆ.

ಯುವಶಕ್ತಿಯ ಪ್ರವಾಹಕ್ಕೆ ಅಣೆಕಟ್ಟು ಹಾಕುವ ಕೆಲಸವೂ ಸಾಮಾನ್ಯವಲ್ಲ. ಅದಕ್ಕೆ ವಿಶಿಷ್ಟವಾದ 'ಇಂಜಿನಿಯರಿಂಗ್ ಸ್ಕಿಲ್' ಬೇಕಾಗುತ್ತದೆ. ಯುವಶಕ್ತಿಯ ಸ್ವಭಾವ ಮತ್ತು ಪ್ರವೃತ್ತಿಗಳನ್ನು ಅರ್ಥಮಾಡಿಕೊಂಡ ಮನೋವಿಜ್ಞಾನಿಯೇಈ ಕೆಲಸ ಮಾಡಬೇಕು.

ಇಂದಿನ ಯುವಜನಾಂಗ ಹಿಂದಿನಂತಲ್ಲ. ಅವರು ಹೆಚ್ಚು ಜಾಗೃತರು. ಹೊಸ ವಿಚಾರಗಳ ಅಧ್ಯಯನಕ್ಕೆ ಅವರಿಗಿರುವಷ್ಟು ಅವಕಾಶ ಹಿಂದಿನವರಿಗಿರಲಿಲ್ಲ. ಆಧುನಿಕ ಸಂಪರ್ಕ ಮಾಧ್ಯಮಗಳ ಅದ್ಭುತ ಸವಲತ್ತು ಅವರಿಗಿದೆ. ಯುವಜನರ ಬೌದ್ಧಿಕ ಮತ್ತು ಭೌತಿಕ ಬೆಳವಣಿಗೆಗೆ ಅಗತ್ಯವಾದ ಸಮೃದ್ಧ ಅವಕಾಶಗಳೆಲ್ಲ ಈಗ ಇವೆ.

ನಮ್ಮ ಯುವಜನಾಂಗ ತಮಗೆ ದೊರೆತಿರುವ ಈ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳಬೇಕು. ಹಿರಿಯರಾದವರಿಂದ ಯೋಗ್ಯ ಮಾರ್ಗದರ್ಶನ ಪಡೆದುಕೊಳ್ಳಬೇಕು. ಯುವಜನರ ಅರ್ಥಪೂರ್ಣ ಆಸೆ-ಆಕಾಂಕ್ಷೆಗಳು ಈಡೇರಲು ಅಗತ್ಯವಾದ ಮತ್ತು ಪೂರಕವಾದ ಸನ್ನಿವೇಶಗಳನ್ನು ಹಿರಿಯರಾದವರು ಕಲ್ಪಿಸಿಕೊಡಬೇಕು. ನಾನು ಮೊದಲೇ ಹೇಳಿದಂತೆ, ಯುವಜನರ ಮನಸ್ಸು ಎಷ್ಟು ಪ್ರಬಲವೋ, ಒಮ್ಮೊಮ್ಮೆ ಅಷ್ಟೇ ದುರ್ಬಲವಾಗಿಬಿಡುವುದೂ ಉಂಟು. ಆದ್ದರಿಂದ ಮಾರ್ಗದರ್ಶಕರು ತುಂಬಾ ಎಚ್ಚರವಹಿಸಬೇಕು.

ಯೌವ್ವನದ ಮುಂದೆ ಇಬ್ಬರು ಕನ್ಯೆಯರು ಬಂದು ನಿಲ್ಲುತ್ತಾರಂತೆ. ವಯೋಧರ್ಮಕ್ಕೆ ಅನುಗುಣವಾಗಿ ಕನ್ಯೆಯ ಕೈಹಿಡಿಯುವುದು ಸಹಜ. ಆದರೆ ಯಾವ ಕನ್ಯೆಯ ಕೈಹಿಡಿಯಬೇಕೆಂಬ ಗೊಂದಲಕ್ಕೆ ಸಿಕ್ಕಿಕೊಳ್ಳುತ್ತಾನೆ ಯುವಕ. ಇಬ್ಬರೂ

ಅವನಲ್ಲಿ ಪ್ರೇಮಭಿಕ್ಷೆ ಬೇಡುತ್ತಾರೆ. ಒಬ್ಬಳು ದೃಢ ಮನಸ್ಸನ್ನು ಬೇಡಿದರೆ, ಇನ್ನೊಬ್ಬಳು ಅವನ ದೃಢ ದೇಹವನ್ನು ಬಯಸುತ್ತಾಳೆ. ವಿವೇಚನೆಯುಳ್ಳ ಯುವಕ ಮಾತ್ರ ದೃಢ ಮನಸ್ಸನ್ನು ಬೇಡುವ ಕನ್ಯೆಯ ಕೈಹಿಡಿಯುತ್ತಾನೆ. ಮನೋದೌರ್ಬಲ್ಯವುಳ್ಳವನು ಇನ್ನೊಬ್ಬಳ ಕೈಹಿಡಿದು, ತನ್ನ ದೃಢ ದೇಹವನ್ನು ಕಳೆದುಕೊಳ್ಳುತ್ತಾನೆ.

ಇಲ್ಲಿ ಬರುವ ಮೊದಲ ಕನ್ಯೆ ಸಂಕಲ್ಪ, ಎರಡನೆಯವಳು ವಿಕಲ್ಪ. ಸಂಕಲ್ಪದ ಕೈಹಿಡಿದರೆ ಸತ್ಕೀರ್ತಿ, ಹರ್ಷ, ಸನ್ಮಾನ. ವಿಕಲ್ಪದ ಕೈಹಿಡಿದರೆ ದುಷ್ಕೀರ್ತಿ, ದುಃಖ, ದುಮ್ಮಾನ.

ಯೌವ್ವನ ಎನ್ನುವುದು ಮಾನವನ ಬಾಳಿನಲ್ಲಿ ಒಮ್ಮೆ ದಾಟಿದರೆ ಮತ್ತೆ ಬಾರದ ಅವಧಿ. ಈ ಅವಧಿಯನ್ನು ದುರ್ವ್ಯಯಮಾಡಿ ಪಶ್ಚಾತ್ತಾಪಪಟ್ಟರೆ ಪ್ರಯೋಜನವಿಲ್ಲ. ಈ ಅವಧಿಯ ಒಂದೊಂದು ನಿಮಿಷವೂ ಮಹತ್ವದ್ದು. ಮೇಲಾಗಿ ಯೌವ್ವನದ ಅವಧಿಯೇನೂ ದೀರ್ಘವಲ್ಲ. ನಾವು ಬೇಡವೆಂದರೂ ವಾರ್ಧಕ್ಯ, ಮುಪ್ಪುಗಳು ನಮ್ಮನ್ನು ತಮ್ಮ ಬುಟ್ಟಿಗೆ ಹಾಕಿಕೊಂಡುಬಿಡುತ್ತವೆ.

ಆದ್ದರಿಂದ ಯುವಜನರು ಶ್ರದ್ಧಾಪೂರ್ಣ ಅಧ್ಯಯನ, ಉತ್ಸಾಹಪೂರ್ಣ ಆಟೋಟಗಳು, ಅಷ್ಟೇ ಮುಖ್ಯವಾದ ಸತ್ಸಹವಾಸ, ಸದಭ್ಯಾಸಗಳ ಮೂಲಕ ಅನನ್ಯ ಶಕ್ತಿ ಸಾಮರ್ಥ್ಯಗಳನ್ನು ಮೈಗೂಡಿಸಿಕೊಳ್ಳಬೇಕು. ಈ ಶಕ್ತಿ ಸಾಮರ್ಥ್ಯಗಳು ಸುತ್ತಣ ಸಮಾಜದ ಕ್ಷೇಮಾಭ್ಯುದಯಕ್ಕೆ ವಿನಿಯೋಗವಾಗಬೇಕು.

ಯೌವ್ವನಕ್ಕೆ ಮನ್ನಣೆಯ ದಾಹ ಸಹಜ. ಎಂತಲೇ, ಅದಕ್ಕೆ ಏನೇ ತೊಂದರೆಯಿದ್ದರೂ ಸಾಹಸದ ಸಮುದ್ರದಲ್ಲೇ ಈಜಾಡಬೇಕೆಂಬ ಹುಮ್ಮಸ್ಸು. ಅಂತಹ ಸಾಹಸಕ್ಕೆ ಯಶಸ್ಸು ಕಟ್ಟಿಟ್ಟ ಬುತ್ತಿಯೇನೋ ನಿಜ. ಆದರೆ ಯೌವ್ವನವನ್ನು ಸರಿಯಾಗಿ ಅರ್ಥಮಾಡಿಕೊಂಡು ಬಳಸಬೇಕು. ಹಾಗೆ ಬಳಸಿದರೆ ಅದು ಹೆಸರಿನ ಶಿಖರಕ್ಕೆ ಹತ್ತಿಸುತ್ತದೆ. ಇಲ್ಲವಾದರೆ ಕೆಸರಿನ ಪ್ರಪಾತಕ್ಕೆ ತಳ್ಳಿಬಿಡುತ್ತದೆ ! ○

## Quiz on Scouting for boys - Quiz No. 9

**- *Mohamed Wasil***
Headquarters Commissioner (Programme)

1. How did B.P. got a secret message from his friend in Transval?
2. In which language did he get the second message?
3. Who carried the messages?
4. What did landmarks mean?
5. which are the two types of signal fires?
6. In which area the drums were used for signalling, B.P. says?
7. How did captain clowny send his message to his army?
8. Three short blasts followed by one long blast from scout master means, what?

Note : For answers please read camp fire yarm No. 7.



# ಜಿಲ್ಲಾ ವಾರ್ತೆ

**ಮೈಸೂರು ಗ್ರಾಮಾಂತರ :**



ನೂತನವಾಗಿ ಆರಂಭಗೊಂಡ ಭಗತ್‌ಸಿಂಗ್ ಸ್ಕೌಟ್ ತಂಡ ಮತ್ತು ಕಲ್ಪನಾ ಚಾವ್ಲಾ ಗೈಡ್ ತಂಡಗಳೊಂದಿಗೆ ಸ್ಕೌಟ್ ಮಾಸ್ಟರ್ ಸತೀಶ್, ಲಯನ್ ಶ್ರೀ ತಮ್ಮಣ್ಣೇ ಗೌಡ, ಲಯನ್ ಶ್ರೀ ರಾಜಶೇಖರ್ ಮತ್ತು ಗೈಡ್ ಕ್ಯಾಪ್ಟನ್ ಅಪರ್ಣ.

ಜಿಲ್ಲೆಯ ನಂಜನಗೂಡಿನ ಲಯನ್ಸ್ ಶಿಕ್ಷಣ ಸಂಸ್ಥೆಯಲ್ಲಿ ಸ್ಕೌಟ್ ಮತ್ತು ಗೈಡ್ ತಂಡಗಳನ್ನು ನೂತನವಾಗಿ ಪ್ರಾರಂಭಿಸಲಾಯ್ತು. ದಿ. 18.7.2004 ರಂದು ಜರುಗಿದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾದ ಲಯನ್ ಶ್ರೀ ರಾಜಶೇಖರ್‌ರವರು ವಹಿಸಿದ್ದರು. ಲಯನ್ ಶ್ರೀ ತಮ್ಮಣ್ಣೇಗೌಡರು ಮತ್ತು ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀರಾಮಚಂದ್ರರವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಇದೇ ಸಂದರ್ಭದಲ್ಲಿ ಶ್ರೀರಾಮಚಂದ್ರರವರನ್ನು ಸನ್ಮಾನಿಸಲಾಯಿತು.

**ಚಾಮರಾಜನಗರ:**

ದಿ. 10.9.2004 ರಂದು ನಡೆದ ಸ್ಕೌಟ್ ಮತ್ತು ಗೈಡ್ ಶಿಕ್ಷಕರ ಸಮಾವೇಶದ ಸಮಾರೋಪ ಸಮಾರಂಭದಲ್ಲಿ ಭಾಗವಹಿಸಿದ್ದ ಜಿಲ್ಲಾ ಉಪನಿರ್ದೇಶಕ ರಾದ ಶ್ರೀ ಡಿ. ಶಂಕರ್, ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಬಿ.ವಿ. ರಾಜಶೇಖರ ಮತ್ತು ಜಿಲ್ಲಾ ಪದಾಧಿಕಾರಿ ಗಳನ್ನು ಚಿತ್ರದಲ್ಲಿ ಕಾಣಬಹುದು.



## ಬೆಂಗಳೂರು ಗ್ರಾಮಾಂತರ:



ಶ್ರೀ ಪಿ.ಜಿ.ಆರ್. ಸಿಂಧ್ಯಾ, ಬೃಹತ್, ಮದ್ಯಮ ಮತ್ತು ಸಣ್ಣ ಕೈಗಾರಿಕಾ ಸಚಿವರು, ಕರ್ನಾಟಕ ಸರ್ಕಾರ ಇವರು ಸಭೆಯನ್ನುದ್ದೇಶಿಸಿ ಮಾತನಾಡುತ್ತಿರುವುದು.

ದಿ. 21.9.2004 ರಂದು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪರಿಷತ್ ಸಭೆ ಹಾಗೂ ಸ್ಕೌಟ್ ಮತ್ತು ಗೈಡ್ ಶಿಕ್ಷಕರ ಸಮಾವೇಶ ಹಮ್ಮಿಕೊಳ್ಳಲಾಗಿತ್ತು. ಸನ್ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯಾ, ಬೃಹತ್, ಮದ್ಯಮ ಮತ್ತು ಸಣ್ಣ ಕೈಗಾರಿಕೆಗಳ ಸಚಿವರು ಕರ್ನಾಟಕ ಸರ್ಕಾರ ಹಾಗೂ ಅಧ್ಯಕ್ಷರು ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರ ಅಧ್ಯಕ್ಷತೆಯಲ್ಲಿ ಸಮಾವೇಶ ಜರುಗಿತು. ಈ ಸಭೆಯಲ್ಲಿ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರಾಜ್ಯ ಮುಖ್ಯ ಆಯುಕ್ತರು, ಶ್ರೀ ಸಿ.ಆರ್. ಮಹಮದ್ ಜಹೀರುದ್ದೀನ್ ರಾಜ್ಯ ಸ್ಕೌಟ್ ಆಯುಕ್ತರು, ಶ್ರೀ ಡಿ. ವೆಂಕಟೇಶಯ್ಯ, ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಜಿಲ್ಲಾ ಉಪನಿರ್ದೇಶಕರು ಸಾ.ಶಿ.ಇ., ಶ್ರೀ. ವಸಂತ ಮಾಧವ, ಜಿಲ್ಲಾ ಆಯುಕ್ತರು (ಸ್ಕೌ) ಹಾಗೂ ಶಿಕ್ಷಣಾಧಿಕಾರಿಗಳು, ಶ್ರೀನಾಗರಾಜರಾವ್ ಕ್ಷೇತ್ರ ಶಿಕ್ಷಣಾಧಿಕಾರಿ ದೇವನಹಳ್ಳಿ, ಶ್ರೀ ಕೆ. ಬೋರಯ್ಯ, ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳು, ಶ್ರೀ. ಸಿ. ನಾರಾಯಣ ಸ್ವಾಮಿ ಅಧ್ಯಕ್ಷರು ಚನ್ನಪಟ್ಟಣ ಸ್ಥಳೀಯ ಸಂಸ್ಥೆ, ಶ್ರೀ. ಎಂ. ಎ. ಚಲ್ಲಯ್ಯ ಕೇಂದ್ರ ಸ್ಥಾನಿಕ ಆಯುಕ್ತರು, ಸಾರ್ವಜನಿಕ ಮತ್ತು ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಹಾಗೂ ಸದಸ್ಯರುಗಳು ಹಾಜರಿದ್ದರು.

ಸನ್ಮಾನ್ಯ ಸಚಿವರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ಮಾತನಾಡುತ್ತಾ ಜಿಲ್ಲೆಯ ಎಲ್ಲ ತಾಲ್ಲೂಕುಗಳಲ್ಲೂ ಪ್ರವಾಸ ಕೈಗೊಂಡು ಸ್ಕೌಟ್ಸ್ / ಗೈಡ್ಸ್ ಚಟುವಟಿಕೆಗಳನ್ನು ಚುರುಕುಗೊಳಿಸುವುದಾಗಿಯೂ, ಜಿಲ್ಲಾ ಮಟ್ಟದಲ್ಲಿ ಸ್ಕೌಟ್ಸ್ / ಗೈಡ್‌ಗಳಿಗೆ ಜಿಲ್ಲಾ ಪುರಸ್ಕಾರ್ ನೀಡಲು ಕ್ರಮಕೈಗೊಳ್ಳುವುದಾಗಿ ತಿಳಿಸಿದರು. ಶ್ರೀ ಶಿವನಂಜಪ್ಪ ಜಿಲ್ಲಾ ಕಾರ್ಯದರ್ಶಿ ಸ್ವಾಗತ ಕೋರಿದರು. ಶ್ರೀ ಎಲ್ಲೇಗೌಡ ಬೆಸಗರಹಳ್ಳಿ ವಂದಿಸಿದರು. 50 ಸ್ಕೌಟರ್ಸ್ ಮತ್ತು ಗೈಡರ್ಸ್ ಭಾಗವಹಿಸಿದ್ದರು.

## ಮುಖ್ಯೋಪಾಧ್ಯಾಯರಿಗೆ ಮಾಹಿತಿ ಶಿಬಿರ :

**ದೊಡ್ಡಬಳ್ಳಾಪುರ** ತಾಲ್ಲೂಕಿನ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕರಿಗಾಗಿ ಆಡಳಿತಾತ್ಮಕ ತರಬೇತಿಯನ್ನು ಕ್ಷೇತ್ರ ಸಂಪನ್ಮೂಲ ಕೇಂದ್ರದಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಸಂದರ್ಭದಲ್ಲಿ ದಿ. 29.9.2004 ರಂದು

ಸ್ಕೌಟಿಂಗ್ ಮತ್ತು ಗೈಡಿಂಗ್ ಬಗ್ಗೆ ಮಾಹಿತಿ ನೀಡಲಾಯಿತು. ಶ್ರೀ. ಎನ್. ಶ್ರೀನಿವಾಸನ್, ಉಪನ್ಯಾಸಕರು ಬೆಂಗಳೂರು ಗ್ರಾಮಾಂತರ ಡಯಟ್ ಹಾಗೂ ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಶ್ರೀಮತಿ ವನಜಾಕ್ಷಮ್ಮ ALT(G) ಮತ್ತು ಶ್ರೀಮತಿ ನಾಗಲಾಂಬಿಕೆ ಇವರುಗಳು ಸಂಪನ್ಮೂಲ ವ್ಯಕ್ತಿಗಳಾಗಿದ್ದರು. ಸಮನ್ವಯಾಧಿಕಾರಿಗಳಾದ ಶ್ರೀ ಗಣಪತಿ ಭಟ್‌ರವರು ತರಬೇತಿಯನ್ನು ಆಯೋಜಿಸಿದ್ದರು.

**ದೇವನಹಳ್ಳಿ** ತಾಲ್ಲೂಕು ಕ್ಷೇತ್ರ ಸಂಪನ್ಮೂಲ ಕೇಂದ್ರದ ವತಿಯಿಂದ ತಾಲ್ಲೂಕಿನ ಹಿರಿಯ ಪ್ರಾಥಮಿಕ ಶಾಲೆಗಳ ಮುಖ್ಯ ಶಿಕ್ಷಕರುಗಳಿಗೆ ದಿನಾಂಕ 17.10.04 ರಿಂದ 19.10.04 ರವರೆಗೆ ಆಡಳಿತಾತ್ಮಕ ತರಬೇತಿ ಹಮ್ಮಿಕೊಳ್ಳಲಾಗಿತ್ತು. ಈ ಸಂದರ್ಭದಲ್ಲಿ ದಿನಾಂಕ 19.10.04 ರಂದು ಸ್ಕೌಟಿಂಗ್ ಮತ್ತು ಗೈಡಿಂಗ್ ಬಗ್ಗೆ ಮಾಹಿತಿ ನೀಡಲಾಯಿತು. ಎನ್.ಶ್ರೀನಿನಾಸನ್, ಉಪನ್ಯಾಸಕರು, ಬೆಂಗಳೂರು ಗ್ರಾಮಾಂತರ ಡಯಟ್, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಶ್ರೀ ಎಂ.ಎ.ಚೆಲ್ಲಯ್ಯ, ಕೇಂದ್ರ ಸ್ಥಾನಿಕ ಆಯುಕ್ತರು, ಸಾರ್ವಜನಿಕ ಸಂಪರ್ಕ, ಭಾ.ಸ್ಕೌ.ಗೈ. ಕರ್ನಾಟಕ ಮತ್ತು ಶ್ರೀ. ಜಿ.ಶ್ರೀಕಂಠಮೂರ್ತಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ದೇವನಹಳ್ಳಿ ತಾಲ್ಲೂಕು, ಇವರುಗಳು ಸಂಪನ್ಮೂಲವ್ಯಕ್ತಿಗಳಾಗಿದ್ದರು.

ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ. ಶ್ರೀಕಂಠರವರು ಭೇಟಿ ನೀಡಿ ಮುಖ್ಯ ಶಿಕ್ಷಕರಿಗೆ ಹಿತನುಡಿ ಹೇಳಿದರು. ಸ್ಕೌಟಿಂಗ್ ಚಟುವಟಿಕೆಗಳನ್ನು ರಚನಾತ್ಮಕವಾಗಿ ನಡೆಸುವಂತೆ ತಿಳಿಸಿದರು. ಕ್ಷೇತ್ರ ಸಮನ್ವಯಾಧಿಕಾರಿಗಳಾದ ಶ್ರೀ ಹನುಮಂತಪ್ಪರವರು ತರಬೇತಿಯನ್ನು ಆಯೋಜಿಸಿದ್ದರು. ಕ್ಷೇತ್ರ ಸಂಪನ್ಮೂಲ ವ್ಯಕ್ತಿಗಳು, ಸಮೂಹ ಸಂಪನ್ಮೂಲ ವ್ಯಕ್ತಿಗಳು, ಶಿಕ್ಷಣ ಸಂಯೋಜಕರು ಸಹ ಶಿಬಿರದಲ್ಲಿ ಪಾಲ್ಗೊಂಡಿದ್ದರು. ಈ ಶಿಬಿರದಲ್ಲಿ 48 ಮಂದಿ ಭಾಗವಹಿಸಿದ್ದರು.

## ಗುಲ್ಬರ್ಗಾ:



ಹೀರಕ್‌ಪಂಕ್ ಪ್ರಶಸ್ತಿ ಪಡೆದ ಬುಲ್‌ಬುಲ್‌ಗೆ ಶ್ರೀಮತಿ ನಂದಶಂಕರಯ್ಯ ಸ್ವಾಮಿ ಚಿದ್ರಿರವರು ಪ್ರಶಸ್ತಿಯನ್ನು ವಿತರಿಸುತ್ತಿರುವುದು. ಶ್ರೀ ಶಂಕರಯ್ಯ ಸ್ವಾಮಿ ಚಿದ್ರಿ ಜಂಟಿ ನಿರ್ದೇಶಕರು ಸಾ.ಶಿ.ಇ ಹಾಗೂ ಜಿಲ್ಲಾ ಮುಖ್ಯ ಆಯುಕ್ತರು, ಸಹಾಯಕ ಜಿಲ್ಲಾ ಆಯುಕ್ತರಾದ ಶ್ರೀ ರಮೇಶ್ ಬೇಗಾರ್ ಮತ್ತು ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಪದ್ಮಪ್ರಿಯರವರನ್ನು ಚಿತ್ರದಲ್ಲಿ ಕಾಣಬಹುದು.



ರಾಷ್ಟ್ರಸೇವೆಯ ಆದರ್ಶವನ್ನು ಹರಡಲು ಸ್ಕೌಟ್ ಮತ್ತು ಗೈಡ್ ಚಳವಳಿ ಮಹತ್ವದ ಪಾತ್ರ ವಹಿಸಿದೆ.

- ಇಂದಿರಾ ಗಾಂಧಿ



**ಬಿಜಾಪುರ :**

ದಿನಾಂಕ 2.10.04 ರಿಂದ 5.10.04 ರವರೆಗೆ ಬಿಜಾಪುರದ ವ್ಹಿ.ಭ. ದರಬಾರ ಪದವಿ ಪೂರ್ವ ಕಾಲೇಜಿನಲ್ಲಿ ಸ್ಕೌಟ್‌ಗಳಿಗೆ ಪೂರ್ವ ಸಿದ್ದತಾ ತರಬೇತಿ ಶಿಬಿರ ಹಮ್ಮಿ ಕೊಳ್ಳಲಾಗಿತ್ತು. ಜಿಲ್ಲಾ ಆಯುಕ್ತರು ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕ ರಾದ ಶ್ರೀ ಆರ್. ವೈ ಹೊಸಪೇಟೆ, ಜಿಲ್ಲಾ ಕಾರ್ಯದರ್ಶಿಗಳಾದ, ಶ್ರೀ ಎಸ್.ಎಸ್.ನಿಂಬಾಳ್ ಪ್ರಾಂಶುಪಾಲರಾದ ಶ್ರೀ ವಿ.ವಿ. ಬೆಂಡಿಗೇರಿ. ಉಪಪ್ರಾಂಶುಪಾಲರಾದ ಶ್ರೀ ಎಸ್.ಟಿ. ಪುಣೇಕರ ಇವರುಗಳು ಶಿಬಿರಕ್ಕೆ ಬೇಟಿ ನೀಡಿ ಮಾರ್ಗ ದರ್ಶನ ನೀಡಿದರು ಶಿಬಿರದಲ್ಲಿ 100 ಮಕ್ಕಳು ಭಾಗವಹಿಸಿದ್ದರು.

**ದಕ್ಷಿಣ ಕನ್ನಡ:**

**ಉತ್ತಮ ಪ್ರಜೆಗಳ ನಿರ್ಮಾಣಕ್ಕೆ ಸ್ಕೌಟ್ ಶಿಕ್ಷಣ ಪೂರಕ**

ಮಂಗಳೂರು ಸ್ಕೌಟ್ ಮತ್ತು ಗೈಡ್ಸ್ ಚಟುವಟಿಕೆಯಿಂದ ದೇಶದಲ್ಲಿ ಉತ್ತಮ ಪ್ರಜೆಗಳ ನಿರ್ಮಾಣ ಸಾಧ್ಯವೆಂದು ದ.ಕ. ಜಿಲ್ಲಾಧಿಕಾರಿ ಶ್ರೀ ಅರವಿಂದ ಶ್ರೀವಾಸ್ತವ ನುಡಿದರು.



ಆದಿತ್ಯವಾರ ಜಿಲ್ಲಾಧಿಕಾರಿ ಗಳ ನಿವಾಸದಲ್ಲಿ ನಡೆದ ಭಾರತ್ ಸ್ಕೌಟ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ತೃತೀಯ ಸೋಪಾನ ಪ್ರಶಸ್ತಿ ಪತ್ರ ಪ್ರದಾನ ಸಮಾರಂಭದಲ್ಲಿ ಪ್ರಶಸ್ತಿ ಪತ್ರ ವಿತರಿಸಿ ಅವರು ಮಾತನಾಡಿದರು.

ಸ್ಕೌಟ್-ಗೈಡ್ಸ್ ಚಳುವಳಿಯನ್ನು ಜಿಲ್ಲೆಯಲ್ಲಿ ಇನ್ನಷ್ಟು ಸಕ್ರಿಯವಾಗಿ ನಡೆಸಬೇಕೆಂದು ಜಿಲ್ಲಾ ಸಂಸ್ಥೆಯ ಅಧ್ಯಕ್ಷರೂ ಆದ ಶ್ರೀ ಅರವಿಂದ ಶ್ರೀವಾಸ್ತವ ಹೇಳಿದರು. ಶಾಸಕ ಶ್ರೀ ಯೋಗೀಶ್ ಭಟ್, ರಾಜ್ಯ ಪ್ರಶಸ್ತಿಗಳಿಸಿದುದಕ್ಕಾಗಿ ಜಿಲ್ಲಾ ಸಂಸ್ಥೆಯನ್ನು ಅಭಿನಂದಿಸಿದರು. ಸ್ಕೌಟ್-ಗೈಡ್ಸ್ ಚಳುವಳಿ ವಿದ್ಯಾರ್ಥಿಗಳಿಗೆ ಜೀವನ ಮೌಲ್ಯ ತಿಳಿಸಿ ಸತ್ಪ್ರಜೆಗಳನ್ನಾಗಿ ರೂಪಿಸುತ್ತದೆ ಎಂದರು.

ಸುರತ್ಕಲ್ ಶಾಸಕ ಶ್ರೀ ಕೃಷ್ಣಪಾಲೇಮಾರ್ ಮಾತನಾಡಿ, ಸ್ಕೌಟ್-ಗೈಡ್ಸ್ ಚಟುವಟಿಯಲ್ಲಿ ಮಕ್ಕಳು ತಾವೂ ಬೆಳೆದು, ಪರಿಸರದವರನ್ನೂ ಬೆಳೆಸುತ್ತಾರೆ. ರಾಷ್ಟ್ರಭಕ್ತಿಯನ್ನು ತಿಳಿಸಲಾಗುತ್ತದೆ. ಇದೊಂದು ಶ್ಲಾಘನೀಯ ಚಟುವಟಿಕೆ ಎಂದರು. ಸಂಸ್ಥೆಯ ಪೋಷಕ ಡಾ.ಕೆ.ಆರ್. ಶೆಟ್ಟಿ, ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಕೆ.ಆನಂದ, ಮುಡಾ ಅಧ್ಯಕ್ಷ ಶ್ರೀ ಅಬ್ದುಲ್ ಖಾದರ್ ಉಪಸ್ಥಿತರಿದ್ದರು.

ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಐ.ಎ.ಕೈರನ್ನ ಸ್ವಾಗತಿಸಿದರು. ಸ್ಥಾನೀಯ ಆಯುಕ್ತ ಶ್ರೀ ಯು. ಗೋಪಾಲಕೃಷ್ಣಭಟ್ ಪ್ರಸ್ತಾವನೆಗೈದರು. ಶ್ರೀ ಎಂ. ಪ್ರಭಾಕರ ಭಟ್ ಸಂದೇಶ ವಾಚಿಸಿದರು. ಗೈಡ್ಸ್ ಆಯುಕ್ತೆ ಶ್ರೀಮತಿ ಐರಿನ್ ಡಿಕುನ್ಹಾ ವಂದಿಸಿದರು. ಶ್ರೀ ಎಂ.ಜಿ.ಕಜೆ ಮತ್ತು ಶ್ರೀ ಪ್ರತಿಮ್ ಕುಮಾರ್ ಕಾರ್ಯಕ್ರಮ ನಿರೂಪಿಸಿದರು.

ದಿನಾಂಕ 1.10.04 ರಿಂದ 2.10.04 ರವರೆಗೆ ಮಂಗಳೂರು ಗ್ರಾಮಾಂತರ ದಕ್ಷಿಣ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ನಾಯಕತ್ವ ತರಬೇತಿ ಶಿಬಿರ ಹಮ್ಮಿಕೊಳ್ಳಲಾಗಿತ್ತು. ಬಬ್ಬು ಕಟ್ಟೆಯಲ್ಲಿ ನಡೆದ ಈ ಶಿಬಿರದಲ್ಲಿ ಒಟು 214 ಶಿಬಿರಾರ್ಥಿಗಳು ಪಾಲ್ಗೊಂಡಿದ್ದರು.

ಬಬ್ಬು ಕಟ್ಟೆ ಶಾಲೆಯ ಮೇಲುಸ್ತುವಾರಿ ಸಮಿತಿ ಅಧ್ಯಕ್ಷ ಶ್ರೀ ರಾಘವ ಹೊಸಗದ್ದೆ, ಮಹಿಳಾ ಮಂಡಳಿ ಅಧ್ಯಕ್ಷೆ ಶ್ರೀಮತಿ ಸುವಾಸಿನಿ, ಜಿಲ್ಲಾ ಆಯುಕ್ತ ಶ್ರೀ ಎನ್.ಜಿ. ಮೋಹನ್, ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಆನಂದ, ಉಲ್ಲಾಳ ಪುರಸಭೆ ಉಪಾಧ್ಯಕ್ಷ ಶ್ರೀ ದಿನಕರ ಉಲ್ಲಾಳ, ಕೌನ್ಸಿಲರ್ ಶ್ರೀ ದಿನೇಶ್ ಗಟ್ಟಿ, ಶಿಕ್ಷಣ ಇಲಾಖೆಯ ಅಧಿಕಾರಿಗಳು, ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಶಿಬಿರದ ವಿವಿಧ ಸಮಾರಂಭಗಳಲ್ಲಿ ಪಾಲ್ಗೊಂಡಿದ್ದರು.

**ಕೊಡಗು :**



ದಿನಾಂಕ 2.10.04 ರಂದು ಲಾಲ್ ಬಹದ್ದೂರ್ ಶಾಸ್ತ್ರಿ ಮತ್ತು ಗಾಂಧಿ ಜಯಂತಿ ಅಂಗವಾಗಿ ಕುಷ್ಠರೋಗ ಕುರಿತು ಕುಶಾಲನಗರ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮತ್ತು ಸ್ಥಳಿಯ ವಿದ್ಯಾರ್ಥಿಗಳು ಮತ್ತು ರಾಷ್ಟ್ರೀಯ ಸ್ವಯಂ ಸೇವಾ ವಿದ್ಯಾರ್ಥಿಗಳು ಜಾಥಾ ನಡೆಸಿದರು. ಈ ಕಾರ್ಯಕ್ರಮದಲ್ಲಿ ಶ್ರೀ ಬಿ.ಸಿ. ದೇವರಾಜ್ ADC(S) ಕುಮಾರಿ ಅರ್ಚನಾ ಅರುಂಧತಿರಾಯ್ ರೇಂಜರ್ ಲೀಡರ್ ಶ್ರೀಮತಿ ಸೇವರಿನ್ ಪಿಂಟೋ ಗೈಡರ್ ಶ್ರೀ ಟಿ.ಎಸ್ ಶಶಿಧರನ್ ಸಬಲಂ ಮತ್ತು ಶ್ರೀ ಬೋಜ ರೆಡ್ಡಿ NSS ಸಂಘಟಕರು ಭಾಗವಹಿಸಿದ್ದರು.

## ಕೊಡಗು ಜಿಲ್ಲೆಯಲ್ಲಿ ಜರುಗಿದ ತರಬೇತಿ ಶಿಬಿರಗಳ ವಿವರ

## ವಯಸ್ಕ ನಾಯಕರ ತರಬೇತಿ ಶಿಬಿರಗಳು

| ಕ್ರಮ ಸಂಖ್ಯೆ | ತರಬೇತಿಯ ಶಿಬಿರಗಳ ವಿವರ | ದಿನಾಂಕ | ನಾಯಕರು | ಭಾಗವಹಿಸಿ-ದವರ ಸಂಖ್ಯೆ |
|---|---|---|---|---|
| 1. | ಕಬ್ ಮಾಸ್ಟರ್‌ಗಳ ಮೂಲ ತರಬೇತಿ | 3.10.04 ರಿಂದ 12.10.04 | ಶ್ರೀ ಜಿ.ಸುಕುಮಾರ ALT(G) | 18 |
| 2. | ಸ್ಕೌಟ್‌ಮಾಸ್ಟರ್‌ಗಳ ಮೂಲ ತರಬೇತಿ | 3.10.04 ರಿಂದ 12.10.04 | ಶ್ರೀ ಡಿ. ಬಸವರಾಜ್ LT(S) | 23 |
| 3. | ಗೈಡ್ ಕ್ಯಾಪ್ಟನ್‌ಗಳ ಮೂಲ ತರಬೇತಿ | 5.10.04 ರಿಂದ 12.10.04 | ಸಿಸ್ಟರ್ ಸಿಂಥಿಯಾ LT(G) | 12 |
| 4. | ಫ್ಲಾಕ್ ಲೀಡರ್‌ಗಳ ಮೂಲ ತರಬೇತಿ | 5.10.04 ರಿಂದ 12.10.04 | ಶ್ರೀಮತಿ ನಾಗರತ್ನಮ್ಮ ALT(B) | 24 |

## ಉಡುಪಿ

## ವಯಸ್ಕ ನಾಯಕರ ತರಬೇತಿ ಶಿಬಿರಗಳು

| ಕ್ರಮ ಸಂಖ್ಯೆ | ತರಬೇತಿ ಶಿಬಿರಗಳ ವಿವರ | ದಿನಾಂಕ | ನಾಯಕರು | ಶಿಬಿರಾರ್ಥಿಗಳ ಸಂಖ್ಯೆ |
|---|---|---|---|---|
| 1. | ಕಬ್‌ಮಾಸ್ಟರ್‌ಗಳ ಮೂಲ ತರಬೇತಿ | 3.10.04 ರಿಂದ 12.10.04 | ಶ್ರೀರಾಮರಾವ್ ALT(C) | 13 |
| 2. | ಸ್ಕೌಟ್‌ಮಾಸ್ಟರ್‌ಗಳ ಮೂಲ ತರಬೇತಿ | 3.10.04 ರಿಂದ 12.10.04 | ಶ್ರೀ ಆನಂದ ಅಡಿಗ LT(S) | 17 |
| 3. | ಗೈಡ್ ಕ್ಯಾಪ್ಟನ್‌ಗಳ ಮೂಲ ತರಬೇತಿ | 5.10.04 ರಿಂದ 12.10.04 | ಶ್ರೀಮತಿ ಸುನಿತ ALT(G) | 24 |
| 4. | ಫ್ಲಾಕ್ ಲೀಡರ್‌ಗಳ ಮೂಲ ತರಬೇತಿ | 5.10.04 12.10.04 | ಶ್ರೀಮತಿ ವಿಮಲಾ ಬಾಯಿ ALT(B) | 17 |

## ಉಡುಪಿ ಜಿಲ್ಲಾ ಸರ್ಕಾರಿ ಆಸ್ಪತ್ರೆಯ ಅಭಿವೃದ್ಧಿಗೆ ಉಡುಪಿ ಜಿಲ್ಲಾ ಸಂಸ್ಥೆಯಿಂದ 1 ಲಕ್ಷ ರೂ ಕೊಡುಗೆ

ಉಡುಪಿ ಜಿಲ್ಲಾ ಸಂಸ್ಥೆಯ ಸ್ಕೌಟ್ಸ್, ಗೈಡ್ಸ್, ಸ್ಕೌಟರ್ಸ್, ಗೈಡರ್ಸ್ ಮತ್ತು ಪದಾಧಿಕಾರಿಗಳು ಸಂಗ್ರಹಿಸಿದ 1 ಲಕ್ಷ ರೂಗಳ ನಿಧಿಯನ್ನು ಉಡುಪಿ ಜಿಲ್ಲಾ ಸರ್ಕಾರಿ ಆಸ್ಪತ್ರೆಯ ಅಭಿವೃದ್ಧಿಗಾಗಿ ಡಾ|| ಯು.ಎಂ. ವೈದ್ಯ, ಜಿಲ್ಲಾ ಸರ್ಜನ್ ಜಿಲ್ಲಾ ಆಸ್ಪತ್ರೆ ಉಡುಪಿ ಇವರಿಗೆ ಶ್ರೀ ಎಸ್.ಆರ್ ಉಮಾಶಂಕರ ಭಾ.ಆ.ಸೇ. ಜಿಲ್ಲಾಧಿಕಾರಿ ಉಡುಪಿ ಜಿಲ್ಲೆ, ಇವರ ಮೂಲಕ ದಿನಾಂಕ 25.7.2004 ರಂದು ಹಸ್ತಾಂತರಿಸಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಉಪಸ್ಥಿತರಿದ್ದರು.

## ಬೆಂಗಳೂರು ಗ್ರಾಮಾಂತರ :



ಸಮಾಜ ಸೇವೆಯಲ್ಲಿ ತೊಡಗಿರುವ ಸ್ಕೌಟ್ಸ್, ಗೈಡ್ಸ್ ಕಬ್ಸ್ ಮತ್ತು ಬುಲ್‌ಬುಲ್ಸ್.

ದಿನಾಂಕ 2.10.04 ರಂದು ಪ್ರಗತಿ ವಿದ್ಯಾನಿಕೇತನ ಹಿರಿಯ ಪ್ರಾಥಮಿಕ ಶಾಲೆ ಹಾರೋಹಳ್ಳಿ ಇಲ್ಲಿನ ಸ್ಕೌಟ್ಸ್, ಗೈಡ್ಸ್‌ಗಳು ಗಾಂಧಿಜಯಂತಿ ಅಂಗವಾಗಿ ಭಜನೆ, ಮತ್ತು ಸ್ವಚ್ಚತಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಗ್ರಾಮ ಪಂಚಾಯ್ತಿ ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರು ಮತ್ತು ಶಿಕ್ಷಕ ವೃಂದದವರು, ಕಾರ್ಯಕ್ರಮದಲ್ಲಿ ಭಾಗವಹಿಸಿ ಕಾರ್ಯಕ್ರಮ ಯಶಸ್ವಿಗೊಳಿಸಿದರು.

ಇದೇ ಸಂದರ್ಭದಲ್ಲಿ ಶಾಲೆಯ ಕಬ್ಸ್ ಮತ್ತು ಬುಲ್ ಬುಲ್ ಮಕ್ಕಳು ಕೊಳ್ಳಿಗನಹಳ್ಳಿ ಗ್ರಾಮದಲ್ಲಿ 2 ದಿವಸಗಳ ಶಿಬಿರ ಹೂಡಿದ್ದರು. ಪಲ್ಸ್ ಪೋಲಿಯೋ, ಕುಷ್ಠರೋಗ ನಿವಾರಣೆ, ಏಡ್ಸ್ ಬಗ್ಗೆ ಜಾಗೃತಿ, ಸ್ವಚ್ಚತಾ ಕಾರ್ಯಕ್ರಮ ಮುಂತಾದ ಕಾರ್ಯಕ್ರಮಗಳನ್ನು ನಡೆಸಿಕೊಟ್ಟರು. ದಿನಾಂಕ 3.10.2004 ರಂದು ನಡೆದ ಭವ್ಯ ಶಿಬಿರಾಗ್ನಿಯಲ್ಲಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಶಿವನಂಜಪ್ಪ, ಜಿಲ್ಲಾ ಹಾಲು ಉತ್ಪಾದಕರ ಒಕ್ಕೂಟದ ಶ್ರೀ ಎನ್ ಶಿವಣ್ಣ ಮತ್ತು ಗ್ರಾಮದ ನಾಗರಿಕರು ಉಪಸ್ಥಿತರಿದ್ದರು. ಸ್ಥಳೀಯ ಹಾಲು ಉತ್ಪಾದಕರ ಒಕ್ಕೂಟ ಹಾಗೂ ಸ್ಥಳೀಯ ಮುಖಂಡರುಗಳು ಈ ಶಿಬಿರಕ್ಕೆ ಎಲ್ಲಾ ರೀತಿಯ ನೆರವು ನೀಡಿದರು. ಶ್ರೀಮತಿ ಲಕ್ಷ್ಮಿ ಮತ್ತು ಶ್ರೀಮತಿ ರೇಖಾ ಇವರುಗಳು ಮಾರ್ಗದರ್ಶಕರಾಗಿದ್ದರು.

## ಮೈಸೂರು ಜಿಲ್ಲೆ:

ಮಹಾದೇವಿ ಕಬ್ ಪ್ಯಾಕ್ ವತಿಯಿಂದ 22ನೇ ವಾರ್ಷಿಕೋತ್ಸವದ ಅಂಗವಾಗಿ ಶ್ರೀಮತಿ ಅಮೃತಮ್ಮ ALT (ಕಬ್ ನಾಯಕಿ) ಇವರು ಶಾಲಾ ಅಧ್ಯಕ್ಷಿಣಿ ಶ್ರೀಮತಿ ಪ್ರೊ. ಜಗದಾಂಬ ಮಲ್ಲೇದೇವರು ಅವರಿಗೆ ದಿನಾಂಕ 6.10.04 ರಂದು ಶಾಲೆಗೆ ನೀರಿನ ಟ್ಯಾಂಕ್ ಕೊಡುಗೆಯಾಗಿ ನೀಡಿದರು.



ಬೆಳಗಾಂ :



ರಾಮದುರ್ಗ ತಾಲ್ಲೂಕ್ ಮಟ್ಟದ ಸ್ಕೌಟ್ ಮತ್ತು ಗೈಡ್ ರ‍್ಯಾಲಿಯಲ್ಲಿ ಸುರೇಬಾನ್ ಮದಿಹಾಳ ಶಾಲೆಯ ಕಬ್ಸ್‌ಗಳು ದೇಶಭಕ್ತಿಗೀತೆ ಹಾಡುತ್ತಿರುವುದು.



ರಾಮದುರ್ಗ ತಾಲ್ಲೂಕ್ ಸಾಹಿತ್ಯ ಸಮ್ಮೇಳನದ ಮೆರವಣಿಗೆಯಲ್ಲಿ ಭಾಗವಹಿಸಿದ ಸ್ಕೌಟ್ಸ್ ಗೈಡ್ಸ್‌ಗಳು

**ತುಮಕೂರು :**

ದಿನಾಂಕ 9.9.04 ರಂದು ಶಿರಾ ತಾಲ್ಲೂಕ್ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ಸ್ಕೌಟ್ ಶಿಕ್ಷಕ, ಗೈಡ್ ಶಿಕ್ಷಕಿಯರ ಸಮಾವೇಶ ನಡೆಯಿತು. ಸ್ಥಳಿಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಅಶೋಕ್‌ಕುಮಾರ್ ತಾಲ್ಲೂಕ್ ದೈಹಿಕ ಶಿಕ್ಷಣಾಧಿಕಾರಿಗಳಾದ ಶ್ರೀ ರಂಗನಾಥಗೌಡ, ಸಹಾಯಕ ಜಿಲ್ಲಾ ಆಯುಕ್ತರಾದ ಶ್ರೀ ಪಾತಲಿಂಗಯ್ಯ ಇವರುಗಳು ಸಮಾವೇಶದಲ್ಲಿ ಉಪಸ್ಥಿತರಿದ್ದರು. ನಿವೇಶನಕ್ಕಾಗಿ ಶಿಪಾರಸ್ಸು ಮಾಡಿರುವ ಸ್ಥಳಿಯ ಸಂಸ್ಥೆ ಅಧ್ಯಕ್ಷರು ಹಾಗೂ ತಹಶೀಲ್ದಾರವರಾದ ಶ್ರೀ ಆನಂದರಾಮ ಮದ್ಯಸ್ಥರಿಗೆ ಅಭಿನಂದನೆ ಸಲ್ಲಿಸಲಾಯಿತು.

ದಿನಾಂಕ 4.10.04 ರಿಂದ 6.10.04 ರ ವರೆಗೆ ತುಮಕೂರಿನಲ್ಲಿ ಪಟಾಲಂ ನಾಯಕರ ತರಬೇತಿ ಶಿಬಿರ ಹಮ್ಮಿಕ್ಕೊಳ್ಳಲಾಗಿತ್ತು. 160 ಸ್ಕೌಟ್-ಗೈಡ್ ಭಾಗವಹಿಸಿದ್ದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ .ಬ. ಷಣ್ಮುಖಪ್ಪನವರು ಶಿಬಿರಕ್ಕೆ ಬೇಟಿ ನೀಡಿ ಎಲ್ಲರಿಗೂ ಶುಭ ಕೋರಿದರು. ಈ ಕಾರ್ಯಕ್ರಮದಲ್ಲಿ ಶ್ರೀಮತಿ ಆಶಾಪ್ರಸನ್ನ ಕುಮಾರ್, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ವೇಣುಗೋಪಾಲ ಕೃಷ್ಣ, ಶ್ರೀಮತಿ ಕಮಲ ಜಿಲ್ಲಾ ಆಯುಕ್ತರುಗಳು ಮತ್ತು ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

## ಬೆಂಗಳೂರು ದಕ್ಷಿಣ



ಸರ್ಕಾರಿ ಪದವಿ ಪೂರ್ವ ಕಾಲೇಜು ಕೃಷ್ಣರಾಜಪುರ, ಇಲ್ಲಿನ ಕಲ್ಪನಾ ಚಾವ್ಲಾ ಗೈಡ್ ತಂಡದ ಗೈಡ್ ಮಕ್ಕಳಿಗೆ ಸಮಾಜ ಸೇವಾ ಕರ್ತರಾದ ಶ್ರೀ ಪರೋಪಕಾರಿ ಶ್ರೀನಿವಾಸ್‌ರವರು ಸಮವಸ್ತ್ರವನ್ನು ನೀಡಿದ್ದಾರೆ. ಶ್ರೀಯುತರು ಗೈಡ್‌ಗೆ ಸಮವಸ್ತ್ರವನ್ನು ನೀಡುತ್ತಿರುವುದನ್ನು ಕಾಣಬಹುದು. ಪ್ರಾಂಶುಪಾಲರಾದ ಶ್ರೀಮತಿ ನಾಜ್ ಪಾರ್ಸ್ ಮತ್ತು ಉಪ ಪ್ರಾಂಶುಪಾಲರಾದ ಶ್ರೀ ಮುಸ್ತ ಹಸೀನ್‌ರವರನ್ನು ಚಿತ್ರದಲ್ಲಿ ಕಾಣಬಹುದು.



ಆನೇಕಲ್ ಸ್ಥಳೀಯ ಸಂಸ್ಥೆವತಿಯಿಂದ ಏರ್ಪಡಿಸಲಾಗಿದ್ದ ಶಿಬಿರದಲ್ಲಿ ಭಾಗವಹಿಸಿದ ಸ್ಕೌಟ್ಸ್ ಗೈಡ್ಸ್‌ಗಳು

## ಬೆಂಗಳೂರು ದಕ್ಷಿಣ - ವಯಸ್ಕ ನಾಯಕರ ತರಬೇತಿ ಶಿಬಿರಗಳು

| ಕ್ರಮ ಸಂಖ್ಯೆ | ತರಬೇತಿ ಶಿಬಿರಗಳ ವಿವರ | ದಿನಾಂಕ | ನಾಯಕರು | ಭಾಗವಹಿಸಿದ ಸಂಖ್ಯೆ |
|---|---|---|---|---|
| 1. | ಕಬ್ ಮಾಸ್ಟರ್‌ಗಳ ಮೂಲ ತರಬೇತಿ | 3.10.04 ರಿಂದ 12.10.04 | ಶ್ರೀಮತಿ ಡಿ. ಸಾರಮ್ಮ LT(C) | 13 |
| 2. | ಸ್ಕೌಟ್‌ಮಾಸ್ಟರ್‌ಗಳ ಮೂಲ ತರಬೇತಿ | 3.10.04 ರಿಂದ 12.10.04 | ಶ್ರೀ ಎಂ.ಕೆ. ಖಾನ್ ALT(S) | 24 |
| 3. | ಗೈಡ್ ಕ್ಯಾಪ್ಟನ್‌ಗಳ ಮೂಲ ತರಬೇತಿ | 5.10.04 ರಿಂದ 12.10.04 | ಶ್ರೀಮತಿ ಗಾಯಿತ್ರಿ ಗೌಡ ALT(G) | 17 |

**ಹಾಸನ :**

ಹೊಳೇನರಸೀಪುರ ಸ್ಥಳಿಯ ಸಂಸ್ಥೆ ಆಶ್ರಯದಲ್ಲಿ ಮೂಡಲಹಿಪ್ಪೆ ಗ್ರಾಮದಲ್ಲಿ ದಿನಾಂಕ 2.10.04 ರಿಂದ 4.10.04 ರವರೆಗೆ ತಾಲ್ಲೋಕ್ ಮಟ್ಟದ ಸ್ಕೌಟ್ ಗೈಡ್ ಶಿಬಿರ ನಡೆಸಲಾಯಿತು. ಇದರಲ್ಲಿ 105 ಮಂದಿ ಭಾಗವಹಿಸಿದ್ದರು. ಈ ಶಿಬಿರದಲ್ಲಿ ಮಕ್ಕಳೇ ಸ್ವತಹ ಅಡುಗೆ ಮಾಡಿಕೊಂಡು ಶಿಬಿರದಲ್ಲಿ ಉತ್ಸಾಹದಿಂದ ಭಾಗವಹಿಸಿದರು. ದಿನಾಂಕ 4.10.04 ರಂದು ನಡೆದ ಸರ್ವಧರ್ಮ ಪ್ರಾರ್ಥನೆಯಲ್ಲಿ ಊರಿನ ಗಣ್ಯರಾದ ಶ್ರೀ ಎಂ.ಬಿ. ಶಂಕರ್ ರವರು ಹಾಜರಿದ್ದರು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಹಾಗೂ ಸ್ಥಳಿಯ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿದರು.

**ಚಿತ್ರದುರ್ಗ :**

ದಿನಾಂಕ 4.10.04 ರಿಂದ 6.10.04 ರವರೆಗೆ ಚಿತ್ರದುರ್ಗ ಡಾನ್‌ಬಾಸ್ಕೊ ಶಾಲೆ ಆವರಣದಲ್ಲಿ ಪೆಟ್ರೋಲ್ ನಾಯಕರ ತರಬೇತಿ ಶಿಬಿರ ಹಮ್ಮಿಕೊಳ್ಳಲಾಗಿತ್ತು. ಈ ಶಿಬಿರದಲ್ಲಿ 240 ಮಕ್ಕಳು ಭಾಗವಹಿಸಿದ್ದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ಶಿಬಿರಕ್ಕೆ ಬೇಟಿ ನೀಡಿ ಎಲ್ಲರಿಗೂ ಶುಭ ಕೋರಿದರು. ಈ ಕಾರ್ಯಕ್ರಮದಲ್ಲಿ ಶ್ರೀ ಸಿ.ಆರ್. ಮಹಮದ್ ಜಹಿರುದ್ದೀನ್, ರಾಜ್ಯ ಆಯುಕ್ತರು ಸ್ಕೌಟ್, ಶ್ರೀ ಎಂ.ಆರ್. ನಾರಾಯಣಪ್ಪ, ಶ್ರೀಮತಿ ಹೇಮಂತಿನಿ ಪ್ರಕಾಶ್ ಜಿಲ್ಲಾ ಆಯುಕ್ತರುಗಳು ಮತ್ತು ಡಾನ್‌ಬಾಸ್ಕೊ ಪ್ರಾಂಶುಪಾಲರು, ಹಾಗೂ ಜಿಲ್ಲಾ ಪದಾಧಿಕಾರಿಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದರು.



ನನಗೇನಾದರೂ ಒಂದು ಡಜನ್ ಮಕ್ಕಳಿದ್ದಿದ್ದರೆ ಅವರಲ್ಲಿ ಪ್ರತಿಯೊಬ್ಬನನ್ನೂ ಸ್ಕೌಟ್ ಮತ್ತು ಗೈಡ್ ಚಳವಳಿಗೆ ಕಳುಹಿಸುತ್ತಿದ್ದೆ.

- ಡಾ|| ಅನಿ ಬೆಸೆಂಟ್

ಸ್ಕೌಟ್ ಗೈಡ್ ಇದು ಮೂಲತಃ ಚಾರಿತ್ರ್ಯ ಬೆಳೆಸುವ ಒಂದು ಚಳವಳಿಯಾಗಿದ್ದು, ನಮ್ಮ ರಾಷ್ಟ್ರದ ಅಷ್ಟೇ ಏಕೆ - ಇಡೀ ಪ್ರಪಂಚದ ಪ್ರಜಾಪ್ರಭುತ್ವ ಸಮಾಜದ ಭಾರವನ್ನು ಹೊರಲು, ಹಾಗೂ ನಾವು ಯೋಗ್ಯ ನಾಗರಿಕರಾಗಲು ತರಬೇತಿ ನೀಡುತ್ತದೆ.

- ಎಸ್. ನಿಜಲಿಂಗಪ್ಪ



**ಬಿಜಾಪುರ :**



2004ನೇ ಸಾಲಿನ ಜಿಲ್ಲಾ ಮಟ್ಟದ ಅತ್ಯುತ್ತಮ ಶಿಕ್ಷಕ ಪ್ರಶಸ್ತಿ ಪಡೆದ ನಂದಿಹಾಳ ಹಿರಿಯ ಪ್ರಾಥಮಿಕ ಶಾಲೆ ಮುಖ್ಯ ಶಿಕ್ಷಕರಾದ ಶ್ರೀ ಎಸ್.ಎಸ್. ಬೊಮ್ಮನಳ್ಳಿ, HWB(S) ಇವರನ್ನು ಸನ್ಮಾನಿಸುತ್ತಿರುವುದು.

**ಮೈಸೂರು ಗ್ರಾಮಾಂತರ:**



ದಿನಾಂಕ 05.09.2004 ರಂದು ಶಿಕ್ಷಕರ ದಿನಾಚರಣೆ ಅಂಗವಾಗಿ ಏರ್ಪಡಿಸಿದ್ದ ಸಮಾರಂಭದಲ್ಲಿ ನಂಜನಗೂಡು ಶಾಸಕರಾದ ಶ್ರೀ ಡಿ.ಟಿ. ಜಯಕುಮಾರ್, ಟಿ. ನರಸೀಪುರ ಶಾಸಕರಾದ ಶ್ರೀ ಹೆಚ್ ಮಹಾದೇವಪ್ಪ ಹಾಗೂ ಇತರರನ್ನು ಚಿತ್ರದಲ್ಲಿ ಕಾಣಬಹುದು. ಇದೇ ಸಂದರ್ಭದಲ್ಲಿ ರಾಜ್ಯ ಪುರಸ್ಕಾರ ಹಾಗೂ ರಾಷ್ಟ್ರಪತಿ ಸ್ಕೌಟ್ ಪ್ರಮಾಣ ಪತ್ರಗಳನ್ನು ವಿತರಿಸಲಾಯಿತು.



ನನ್ನ ದೃಷ್ಟಿಯಲ್ಲಿ ಸ್ಕೌಟ್ ಮತ್ತು ಗೈಡ್‌ಗಳು ಅತ್ಯುತ್ತಮ ಆಸ್ತಿ. ಅವರು ಹೆಚ್ಚು ವಿಕಾಸಗೊಂಡಷ್ಟು ರಾಷ್ಟ್ರಕ್ಕೆ ಹೆಚ್ಚು ಒಳಿತಾಗುತ್ತದೆ.

- ಜವಾಹರಲಾಲ್ ನೆಹರು

**ಹಾವೇರಿ :**



ಶ್ರೀ ಅಜೀಜುಲ್ಲಾ ಬೇಗ್, ಭಾ.ಆ.ಸೇ., ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರು ಮಾತನಾಡುತ್ತಿರುವುದು. ಜಿಲ್ಲೆಯ ಪದಾಧಿಕಾರಿಗಳನ್ನು ಚಿತ್ರದಲ್ಲಿ ಕಾಣಬಹುದು.

ರಾಜ್ಯ ಪುರಸ್ಕಾರ ಸ್ಕೌಟ್ಸ್, ಗೈಡ್ಸ್‌ಗಳ ಪೂರ್ವ ಸಿದ್ದತಾ ಶಿಬಿರವು ಜಿಲ್ಲಾ ವತಿಯಿಂದ ಜೆ.ಪಿ. ರೋಟರಿ ಪ್ರೌಢ ಶಾಲೆ ಆವರಣದಲ್ಲಿ ದಿನಾಂಕ 4.10.04 ರಂದು ಜರುಗಿತು.

ಮಾನ್ಯ ಶ್ರೀ ಅಜೀಜುಲ್ಲಾ ಬೇಗ್ ಜಿಲ್ಲಾಧಿಕಾರಿಗಳು, ಹಾಗೂ ಅಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಹಾವೇರಿ ಇವರು ಸಮಾರೋಪ ಸಮಾರಂಭದಲ್ಲಿ ಅಧ್ಯಕ್ಷತೆವಹಿಸಿ ಸಂಸ್ಥೆಯ ಧ್ಯೇಯ ದೋರಣೆಗಳ ಬಗ್ಗೆ ಶಿಸ್ತು ಪಾಲನೆ. ದೇಶಾಭಿಮಾನದ ಬಗ್ಗೆ ಸಂಸ್ಥೆಯು ಮಾಡುತ್ತಿರುವ ಕಾರ್ಯಕ್ರಮಗಳಿಗೆ ಮೆಚ್ಚುಗೆ ವ್ಯಕ್ತಪಡಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಪ್ರಭಾಕರ್‌ರಾವ್, ಮಂಗಳೂರು, ಜಿಲ್ಲಾ ಮುಖ್ಯ ಆಯುಕ್ತರು ಶ್ರೀಮತಿ ಮಾಧುರಿ ದೇವಧರ್, ಜಿಲ್ಲಾ ಆಯುಕ್ತರು (ಗೈಡ್) ಮತ್ತು ಶ್ರೀ ಎಸ್.ಬಿ. ಬಸೇಗಣ್ಣಿ ಚೌರಮನ್ನೂರು ಜೆ.ಪಿ. ರೋಟರಿ ಶಿಕ್ಷಣ ಸಂಸ್ಥೆ ಹಾವೇರಿ ಇವರುಗಳು ಭಾಗವಹಿಸಿದ್ದರು ಮಾನ್ಯ ಶ್ರೀ ಹೆಚ್.ಎಸ್. ಓಬೇದುಲ್ಲಾಖಾನ್ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯ ಜೀವಿ ಉಪವಿಭಾಗ, ರಾಣೆಬೆನ್ನೂರು ಇವರು 50ನೇ ವನ್ಯಜೀವಿ ಸಪ್ತಾಹದ ಅಂಗವಾಗಿ ಮಕ್ಕಳಿಗೆ ವನ್ಯಜೀವಿಗಳ ಬಗ್ಗೆ ತಿಳುವಳಿಕೆ ನೀಡಿದರು. ಇದೇ ಸಂದರ್ಭದಲ್ಲಿ ನೇತ್ರದಾನಕ್ಕೆ ಪ್ರೇರೇಪಿಸಿದವರನ್ನು ಸನ್ಮಾನಿಸಲಾಯಿತು. ಸ್ಕೌಟ್ಸ್, ಗೈಡ್ಸ್ ಮಕ್ಕಳಿಗೆ ವನ್ಯಜೀವಿ ಸಪ್ತಾಹದ ಅಂಗವಾಗಿ ಚಿತ್ರಕಲಾ ಸ್ಪರ್ಧೆಯನ್ನು ಹಮ್ಮಿಕೊಳ್ಳಲಾಗಿತ್ತು.

ಶಿಬಿರದಲ್ಲಿ 150 ಸ್ಕೌಟ್ಸ್, ಗೈಡ್ಸ್, ಸ್ಕೌಟರ್ಸ್ ಗೈಡರ್ಸ್‌ಗಳು ಭಾಗವಹಿಸಿದ್ದರು. ಶ್ರೀ ಎಂ.ಆರ್ ಪಾಟೀಲ್ ಜಿಲ್ಲಾ ತರಬೇತಿ ಆಯುಕ್ತರು. ಶ್ರೀ ಶೇಖ್ ಸುರಣಗಿ, ಜಿಲ್ಲಾ ಸಂಘಟನಾ ಆಯುಕ್ತರು, ಶ್ರೀ ಎಂ.ಬಿ ರಜಪುತ್, ಜಿಲ್ಲಾ ಕಾರ್ಯದರ್ಶಿ ಕು|| ರುಕ್ಸಾನಾ ಗುಡಗೇರಿ ಇವರೆಲ್ಲರು ಶಿಬಿರವನ್ನು ಯಶಸ್ವಿಗೊಳಿಸಿದರು.

**ತುಮಕೂರು :**

ತಿಪಟೂರು ತಾಲ್ಲೂಕು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ವತಿಯಿಂದ ಕೊಡಗಿನ 'ಸಂಪಾಜೆ' ಅರಣ್ಯ ಪ್ರದೇಶದಲ್ಲಿ ಅಕ್ಟೋಬರ್ 06 ಹಾಗೂ 07 ರಂದು ಎರಡು ದಿನಗಳ ಕಾಲ 'ವಿಶ್ವ ವನ್ಯಜೀವಿ ಸಪ್ತಾಹ' ಸಮಾರಂಭವನ್ನು ಏರ್ಪಡಿಸಲಾಗಿತ್ತು. ಈ ಸಪ್ತಾಹದ ಅಂಗವಾಗಿ ಶಾಲಾ ವಿದ್ಯಾರ್ಥಿಗಳಿಗಾಗಿ ವನ್ಯಜೀವಿ ಹಾಗೂ ಪರಿಸರದ ಬಗ್ಗೆ 'ಕನ್ನಡ ರಸಪ್ರಶ್ನೆ ಸ್ಪರ್ಧೆ'ಯನ್ನು ಏರ್ಪಡಿಸಿ, ಇದರಲ್ಲಿ ಮಾಯಸಂದ್ರ ನೆಹರು ಬಾಲಿಕಾ ಪ್ರೌಢಶಾಲಾ ಗೈಡ್ ಕು. ವನಜಾಕ್ಷಮ್ಮ

ಬಾಣಸಂದ್ರಂ. ವಿ.ಎಸ್. ಎಸ್. ಸಂಯುಕ್ತ ಪದವಿ ಪೂರ್ವ ಕಾಲೇಜಿನ ಸ್ಕೌಟ್ ಸಿ.ಎಸ್. ಗೋಪಾಲಕೃಷ್ಣ ಹಾಗೂ ತಿಪಟೂರು ಶ್ರೀ ವಿದ್ಯಾಪೀಠ ಸಂಯುಕ್ತ ಪದವಿ ಪೂರ್ವ ಕಾಲೇಜಿನ ಸ್ಕೌಟ್ ಕೆ.ಬಿ. ಯಶವಂತ ಕುಮಾರ್ ಇವರುಗಳು



ವಿಜೇತರಾಗಿದ್ದು, ಈ ವಿಜೇತ ಸ್ಕೌಟ್ಸ್, ಗೈಡ್ಸ್ ಹಾಗೂ ಇತರೆ ಶಾಲಾ ಕಾಲೇಜುಗಳಿಂದ ಆಯ್ದ ಹೊಸ ಸ್ಕೌಟ್ಸ್, ಗೈಡ್ಸ್‌ಗಳನ್ನು 'ಸಂಪಾಜೆ' ಅರಣ್ಯಕ್ಕೆ ಸಂಸ್ಥೆ ವತಿಯಿಂದ ಸಂಸ್ಥೆಯ ಛೇರ್ಮನ್‌ರವರಾದ ಶ್ರೀಸದಾಶಿವರಾವ್ ಹಾಗೂ ಮೈಸೂರು ಜಿಲ್ಲಾ ಅರಣ್ಯಾಧಿಕಾರಿಗಳಾದ ಶ್ರೀ ಎಸ್. ಧನಂಜಯ ಇವರುಗಳ ಮಾರ್ಗದರ್ಶನದಲ್ಲಿ ಉಚಿತವಾಗಿ ಟ್ರಕ್ಕಿಂಗ್ ಕರೆದುಕೊಂಡು ಹೋಗಿ ಅಂದರೆ ದಿನಾಂಕ 06-10-2004 ರಂದು 'ಸಂಪಾಜೆ' ಅರಣ್ಯ ವಿಶ್ರಾಂತಿ ಗೃಹದಲ್ಲಿ ಸರಳ ಸಮಾರಂಭವನ್ನು ಏರ್ಪಡಿಸಿ, ವಿಜೇತರುಗಳಿಗೆ ಬಹುಮಾನಗಳನ್ನು ವಿತರಿಸಲಾಯಿತು.

ಸಂಸ್ಥೆಯ ಸಹಾಯಕ ಜಿಲ್ಲಾ ಕಮೀಷರನ್ ಶ್ರೀ ಹೆಚ್. ವಿ. ಲಕ್ಷ್ಮೀನಾರಾಯಣರವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು ಹಾಗೂ ತಿಪಟೂರು ಕಲ್ಪತರು ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರಾದ ಶ್ರೀಮತಿ ಸಾವಿತ್ರಿ ಹೊಸಮನಿ, ಸಂಸ್ಥೆಯ ಸದಸ್ಯರುಗಳಾದ ಶ್ರೀಮತಿ ಕಲ್ಪನ, ಶ್ರೀ ಹೆಚ್. ಎಸ್. ಸುರೇಶ್ ಇವರುಗಳು ಮುಖ್ಯ ಅತಿಥಿಗಳಾಗಿ ಆಗಮಿಸಿ, ವಿಜೇತರುಗಳಿಗೆ ಬಹುಮಾನ ವಿತರಣೆ ಮಾಡಿ ವನ್ಯಜೀವಿ ಹಾಗೂ ಪರಿಸರದ ಬಗ್ಗೆ ಸ್ಕೌಟ್ಸ್, ಗೈಡ್ಸ್‌ಗಳಿಗೆ ಅರಿವು ಮೂಡಿಸಿದರು. ಸ್ಕೌಟ್ಸ್, ಗೈಡ್ಸ್‌ಗಳಿಗೆ 'ಸಂಪಾಜೆ' ಅರಣ್ಯದಲ್ಲಿ ಸುಮಾರು 12 ಕಿ.ಮೀ. ಟ್ರಕ್ಕಿಂಗ್ ಅನ್ನು ಅರಣ್ಯ ಸಹಾಯಕರಾದ ಶ್ರೀ ರವೀಂದ್ರರವರ ಮಾರ್ಗದರ್ಶನದೊಂದಿಗೆ ಏರ್ಪಡಿಸಲಾಗಿತ್ತು. ಈ ಟ್ರಕ್ಕಿಂಗ್ ಕಾರ್ಯಕ್ರಮದಲ್ಲಿ ಸುಮಾರು 25 ಮಂದಿ ಭಾಗವಹಿಸಿ ಪ್ರಕೃತಿಯ ಸೊಬಗನ್ನು ಸವಿದರು. ಸಂಸ್ಥೆಯ ಕಾರ್ಯದರ್ಶಿ ಶ್ರೀ ಕೆ. ಎಸ್. ಬಸವರಾಜು ಕಾರ್ಯಕ್ರಮವನ್ನು ನಿರೂಪಿಸಿ ಅತಿಥಿಗಳನ್ನು ವಂದಿಸಿದರು.

## ವಿಶೇಷ ಸೂಚನೆ ಹಾಗೂ ಮನವಿ

- ತಾವು ಕಳಿಸುವ ಸುದ್ದಿ ಸಂಕ್ಷಿಪ್ತವಾಗಿರಲಿ.
- ಭಾವ ಚಿತ್ರವನ್ನು ಕಳಿಸುವಾಗ ಅದರ ವಿವರಗಳನ್ನು ಸಂಕ್ಷಿಪ್ತವಾಗಿ ಪ್ರತ್ಯೇಕ ಹಾಳೆಯಲ್ಲಿ ಬರೆಯಿರಿ.
- ಅನುಭವಿ ಸ್ಕೌಟ್ ಶಿಕ್ಷಕ ಮತ್ತು ಗೈಡ್ ಶಿಕ್ಷಕಿಯರು ಹಾಗೂ ಸ್ಕೌಟ್, ಗೈಡ್‌ಗಳು ಲೇಖನಗಳನ್ನು, ಕವನಗಳನ್ನು ಹಾಗೂ ವಿಶಿಷ್ಟ ಅನುಭವಗಳನ್ನು, ಬರೆದು ಕಳುಹಿಸಲು ಕೋರಿದೆ.
- ತರಬೇತಿ ತಂಡದ ಸದಸ್ಯರುಗಳು ತರಬೇತಿಗೆ ಸಂಬಂಧಪಟ್ಟ ಲೇಖನಗಳನ್ನು ಕಳುಹಿಸಿಕೊಡಲು ಕೋರಿದೆ.
- ಸ್ಕೌಟ್ ಗೈಡ್ ವಾರ್ತಾ ಪತ್ರಿಕೆಯ ಲೇಖನಗಳ ಬಗ್ಗೆ ಓದುಗರ, ಚಂದಾದಾರರ ಪ್ರತಿಕ್ರಿಯೆಯನ್ನು ತಿಳಿಸಲು ಕೋರಿದೆ.

**- ಸಂಪಾದಕ ಮಂಡಳಿ**

ದಾವಣಗೆರೆ :



ದಿನಾಂಕ 02.10.2004 ರಂದು ದಾವಣಗೆರೆ ಜಿಲ್ಲಾ ಸಂಸ್ಥೆ ಆವರಣದಲ್ಲಿ ಗಾಂಧಿ ಜಯಂತಿ ಅಂಗವಾಗಿ ಏರ್ಪಡಿಸಿದ್ದ ಸರ್ವಧರ್ಮ ಪ್ರಾರ್ಥನೆಯಲ್ಲಿ ಸ್ಕೌಟ್ ಗೈಡ್‌ಗಳು.

# Miss K. Manohara

## *Former Headquarters Commissioner (Guides) Felicitated*



Miss K. Manohara, Former Head Quarter Commissioner (for persons with Disability) Bharat scouts and Guides, Karnataka was felicitated on 12th Sep 2004 by the Karuna Animal Welfare Association (SPCA) Bangalore.

She was closely associated with NIMHANS in the Rehabilitation work for the persons with Mental disability. She retired as Superintendent, School for Deaf and Blind children, Tilak Nagar, Mysore. Qualified person in Diploma in Education of the Blind, Mussachusets U.S.A. M.Ed in education of all types (9 Major Types) of Handicapped., Boston University U.S.A.

Her Association with Animal Welfare started at the age of 7 and with the persons with desiability from 1955. She served as a Super intendent at Vocational Institute for Women, Mysore, & Gulbarga and closely associated with various organisation i.e Indian Red Cross Society, All India Women Conference, Rehabilitation Study Group, State Basket Ball Association, State Athletic Association National Association for the Blind. All India Federation of the Deaf, State Temperence Board. She is even now interested in serving the Handicapped & Mentally retarted children. She is rendering her services to the Movement since four decades.

# ಸ್ಕೌಟ್ ಸಮಾರಂಭಗಳು

(ಹಿಂದಿನ ಸಂಚಿಕೆಯಿಂದ) - ಎನ್. ಶ್ರೀನಿವಾಸನ್. ಎಲ್.ಟಿ (ಸ್ಕೌಟ್ಸ್)

## ರೋವರ್‌ನ ದೀಕ್ಷಾವಿಧಿ

### ಭಾಗ 1 - ಆತ್ಮಪರೀಕ್ಷೆ

(ಈ ಭಾಗವನ್ನು ಮತ್ತು ಇದರ ಮುಂದಿನ ಭಾಗವನ್ನು ಶ್ರೀ ಆರ್. ಚಂದ್ರಶೇಖರನ್ ಎಲ್.ಟಿ(ಕಬ್) ಇವರು ಬರೆದಿರುವ "ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಯುವಕರು" ಎಂಬ ಗ್ರಂಥದಿಂದ ಸಂಗ್ರಹಿಸಲಾಗಿದೆ)

ರೋವರ್ ಆದವನು ಪ್ರೌಢನಾಗಿರುತ್ತಾನೆ. ಮರಿಯ (ಕಬ್) ಮತ್ತು ಸ್ಕೌಟ್‌ನ ದೀಕ್ಷೆಗಿಂತ ಭಿನ್ನವಾದ ರೀತಿಯಲ್ಲಿ ರೋವರ್ ದೀಕ್ಷೆ ಇರುತ್ತದೆ. ಮರಿಯ ಕಲಿಯುವಿಕೆಯಲ್ಲಿ ವಯಸ್ಕ ನಾಯಕನ ಪಾತ್ರ, ಮಾರ್ಗದರ್ಶನ ಶೇ 75 ಆದರೆ ಸ್ಕೌಟ್ ಬಾಲಕನ ವಿಷಯದಲ್ಲಿ ಇದು ಶೇ 50 ರಷ್ಟು ಆಗಿರುತ್ತದೆ. ಆದರೆ ರೋವರ್‌ನ ವಿಷಯದಲ್ಲಿ ವಯಸ್ಕ ನಾಯಕನ ಪಾತ್ರ ಶೇ 25 ಕ್ಕಿಂತ ಕಡಿಮೆ. ಬದಲಿಗೆ ಸ್ವಂತ ಜವಾಬ್ದಾರಿ, ಚಿಂತನೆ ಹಾಗೂ ಸ್ವಯಂ ತೀರ್ಮಾನಕ್ಕೆ ಹೆಚ್ಚು ಒತ್ತು ನೀಡಲಾಗುತ್ತದೆ.

ನಿಯಮಾವಳಿಯಂತೆ 15(16) ವರ್ಷ ಪೂರೈಸಿರುವ ಹಾಗೂ ಪ್ರವೇಶ ಅವಶ್ಯಕತೆಗಳನ್ನು ರೋವರ್ ಲೀಡರ್‌ಗೆ ತೃಪ್ತಿಯಾಗುವಂತೆ ಪೂರೈಸಿರುವ ರೋವರ್ ಅಭ್ಯರ್ಥಿಗೆ ದೀಕ್ಷೆ ನೀಡಲಾಗುತ್ತದೆ.

ರೋವರ್ ಆಗಿ ದೀಕ್ಷೆ ನೀಡುವ ಮುನ್ನ ಮತ್ತೊಂದು ವಿಧಿಯನ್ನು ಅನುಸರಿಸಲಾಗುತ್ತದೆ. ಅದೇ ಆತ್ಮಪರೀಕ್ಷೆ (vigil). ಈ ವಿಧಿಯಲ್ಲಿ ಯುವಕನು ತನಗೆ ತಾನೇ ಹಲವಾರು ಪ್ರಶ್ನೆಗಳನ್ನು ಕೇಳಿಕೊಂಡು ಸ್ಕೌಟಿಂಗ್ ತನಗೆ ಒಗ್ಗುತ್ತದೆಯೊ ಎಂಬುದನ್ನು ನಿರ್ಧರಿಸುತ್ತಾನೆ. ತಾನು ಅದಕ್ಕೆ ಅರ್ಹನೇ ಎಂಬುದರ ಬಗ್ಗೆ ತೀರ್ಮಾನ ಕೈಗೊಳ್ಳುತ್ತಾನೆ. ಈ ಆತ್ಮ ಪರೀಕ್ಷೆಯನ್ನು ಹೇಗೆ ಮತ್ತು ಎಲ್ಲಿ ಮಾಡಿಕೊಳ್ಳಬೇಕೆಂಬುವ ಬಗ್ಗೆ ರೋವರನೇ ತೀರ್ಮಾನಕ್ಕೆ ಬರಬೇಕು. ಇದನ್ನು ಮನೆ, ದೇವಾಲಯ, ಚರ್ಚ್, ಮಸೀದಿ, ಅಥವಾ ಪ್ರಕೃತಿಯ ಮಡಿಲಲ್ಲಿ ಪ್ರಶಾಂತ ವಾತಾವರಣದಲ್ಲಿ ಮಾಡಿಕೊಳ್ಳಬಹುದು. ರೋವರ್ ಇಷ್ಟಪಟ್ಟಲ್ಲಿ ಅವನೊಂದಿಗೆ ಒಬ್ಬ ಜಾಮೀನುದಾರ (Sponsor) ಅಥವಾ ರೋವರ್ ಸ್ಕೌಟ್ ಲೀಡರ್ ಇರಬಹುದು. ಆತ್ಮ ಪರೀಕ್ಷೆಯ ಸ್ಥಳ ಹಾಗೂ ಕಾಲ ರೋವರ್ ಲೀಡರಿಗೆ ತಿಳಿದಿರಬೇಕು.

ಆತ್ಮ ಪರೀಕ್ಷೆ ಮಾಡಿಕೊಳ್ಳಲು ಒಂದು ಪ್ರಶ್ನಾವಳಿಯನ್ನು ತಯಾರಿಸಿ ರೋವರ್‌ಗೆ ನೀಡಲಾಗುತ್ತದೆ. ಇದನ್ನು ನಿಧಾನವಾಗಿ ಓದಿ, ಪರಾಮರ್ಶೆ ಮಾಡಿ ಸೂಕ್ತ ನಿರ್ಧಾರಕ್ಕೆ ಬರಬೇಕು.

ಪ್ರಶ್ನೆಗಳು ಇಂತಿದೆ:

1. ದೇವರು ನೀಡಿರುವ ಈ ಜನ್ಮವನ್ನು ಉಪಯುಕ್ತ ರೀತಿಯಲ್ಲಿ ಕಳೆಯುತ್ತಿದ್ದೇನೆಯೇ ?
2. ಹೇಳಿಕೊಳ್ಳುವಂತಹ ಯಾವುದೇ ಕೆಲಸವನ್ನೂ ಮಾಡದೆ ಕಾಲಹರಣ ಮಾಡುತ್ತಿದ್ದೇನೆಯೇ ?
3. ಯಾರಿಗೂ ಉಪಯೋಗವಿಲ್ಲದ ಕೆಲಸಗಳಲ್ಲಿ ಕಾಲ ಕಳೆಯುತ್ತಿದ್ದೇನೆಯೇ ?
4. ಸ್ವಸಂತೋಷ, ದುಡ್ಡು ಮಾಡುವುದು, ವೃತ್ತಿಯಲ್ಲಿ ಭಡ್ತಿ ಇವುಗಳಿಗಾಗಿಯೇ ಕಾಲಕಳೆಯುತ್ತಾ ಬೇರೆಯವರಿಗೆ ಸಹಾಯ ಮಾಡಲು ಪ್ರಯತ್ನಿಸುತ್ತಿಲ್ಲವೇ?
5. ನನ್ನ ಜೀವನದಲ್ಲಿ ಇತರರಿಗೆ ತೊಂದರೆ ಕೊಟ್ಟಿದ್ದೇನೆಯೇ, ಮನಸ್ಸು ನೋಯಿಸಿದ್ದೇನೆಯೇ ? ಹಾಗಿದ್ದರೆ ಅದನ್ನು ಸರಿಪಡಿಸಿ ಕೊಳ್ಳುವುದು ಹೇಗೆ?

6. ನನ್ನ ಜೀವನದಲ್ಲಿ ಯಾರಿಗೆ ಸಹಾಯ ಮಾಡಿದ್ದೇನೆ ? ಸಹಾಯ ಮಾಡುವಂತಹವರು ಇನ್ನಾರಾದರೂ ಇದ್ದಾರೆಯೇ?

7. ನಾನು ರೋವರ್ ಸ್ಕೌಟಿಂಗ್‌ನಿಂದ ದೊರಕುವ ವಿನೋದಕ್ಕಾಗಿ ಮಾತ್ರ ಆ ವಿಭಾಗವನ್ನು ಸೇರುತ್ತಿದ್ದೇನೆಯೇ?

8. ನಾನು ತ್ಯಾಗಶೀಲಭಾವನೆಯಿಂದ ಸೇವೆ ಸಲ್ಲಿಸಲು ಕಂಕಣ ಕಟ್ಟಿದ್ದೇನೆಯೇ ?

9. ನನ್ನ ಅಭಿಪ್ರಾಯದಲ್ಲಿ "ಸೇವೆ" ಎಂದರೇನು?

10. ನಾನು ಮಾಡುತ್ತಿರುವ ಆಲೋಚನೆ ಮತ್ತು ಕೆಲಸಗಳನ್ನು "ಪರಹಿತ" ಕ್ಕಾಗಿಯೇ ಮಾಡುತ್ತಿದ್ದೇನೆಯೇ ಅಥವಾ ಸ್ವಹಿತಕ್ಕಾಗಿಯೇ?

11. ಮನೆಯಲ್ಲಿ, ಕೆಲಸಮಾಡುವ ಸ್ಥಳದಲ್ಲಿ, ವಿರಾಮ ವೇಳೆಯಲ್ಲಿ ಯಾವ ಯಾವ ರೀತಿಯ ಸೇವೆಯನ್ನು ನಾನು ಸಲ್ಲಿಸಲು ಸಾಧ್ಯ?

12. ನಾನು ಈ ಹಿಂದೆ ಯಾವುದಾದರೂ ದುರಭ್ಯಾಸವನ್ನು ಮೈ ಗೂಡಿಸಿಕೊಂಡಿದ್ದರೆ, ಅದನ್ನು ಸಾಧಿಸಿ ಬಿಟ್ಟುಬಿಡಲು ಪ್ರಯತ್ನಿಸುತ್ತೇನೆಯೇ?

13. ನನ್ನ ನಡವಳಿಕೆಯಲ್ಲಿ ಏನಾದರೂ ದೋಷವಿದೆಯೇ? ಅದು ಯಾವುದು !

14. ನಾನು ನಿಸ್ಸಂಶಯವಾಗಿ ಗೌರವಸ್ಥನೆ? ಪ್ರಾಮಾಣಿಕನೇ? ಮತ್ತು ವಿಶ್ವಾಸಾರ್ಹನೇ?

15. ನಾನು ದೇವರಿಗೆ, ನನ್ನ ದೇಶಕ್ಕೆ, ನನ್ನ ಕುಟುಂಬಕ್ಕೆ ನನಗೆ ಕೆಲಸ ಕೊಟ್ಟಿರುವ ಮಾಲೀಕರಿಗೆ, ನನ್ನ ಕೆಳಗಿನವರಿಗೆ, ಸ್ಕೌಟ್ ಸಂಸ್ಥೆಗೆ, ನನ್ನ ಮಿತ್ರರಿಗೆ ಹಾಗೂ ನನ್ನ ಆತ್ಮಕ್ಕೆ ನಿಷ್ಠೆಯಿಂದಿದ್ದೇನೆಯೇ?

16. ನಾನು ಸ್ಥಿಮಿತ ಚಿತ್ತದವನೇ? ಗೆಲುವಿನಿಂದಿರುವವನೇ ಮತ್ತು ಇತರರ ಬಗ್ಗೆ ದಯಾರ್ದ್ರಕ ಹೃದಯವುಳ್ಳವನೇ?

17. ನಾನು, ಹಿತ, ಮಿತಪಾನದವನೇ? ಸ್ವಚ್ಛವಾಗಿದ್ದೇನೆಯೇ?

18. ಕಷ್ಟ ಕಾರ್ಪಣ್ಯಗಳು ಎದುರಾದಾಗ, ಅವುಗಳನ್ನೆದುರಿಸಲು ಬೇಕಾದ ಸ್ಥೈರ್ಯ ಮತ್ತು ಸಹನೆಗಳು ನನ್ನಲ್ಲಿವೆಯೇ?

19. ನನ್ನ ಬುದ್ಧಿಯು ನನ್ನ ಹಿಡಿತದಲ್ಲಿದೆಯೆ? ಅಥವಾ ಇತರರ ಮಾತಿನಿಂದ ಪ್ರಭಾವಿತನಾಗುತ್ತೇನೆಯೆ?

20. ಜೂಜು, ಕುಡಿತ, ವ್ಯಭಿಚಾರ ಮುಂತಾದ ಪ್ರಲೋಭನೆಗಳಿಗೆ ಒಳಗಾಗದೆ ಇರುವಂತಹದೃಢ ಮನಸ್ಸು ನನಗಿದೆಯೇ?

21. ಈ ಹಲವಾರು ಅಂಶಗಳಲ್ಲೇನಾದರೂ, ನನ್ನಲ್ಲಿ ಲೋಪವಿದ್ದರೆ, ಅವುಗಳನ್ನು ಇಲ್ಲಿಂದೀಗಲೇ ಬಿಟ್ಟು, ದೈವ ಸಹಾಯವನ್ನು ಬೇಡಿಕೊಳ್ಳುತ್ತೇನೆ. ಅದರ ಬಲದಿಂದ ನನ್ನ ನ್ಯೂನತೆಗಳನ್ನು ಸರಿಪಡಿಸಿಕೊಳ್ಳಲೂ, ಸಾಧ್ಯವಾಗುವಂತಹವುಗಳನ್ನು ತ್ಯಜಿಸಲೂ, ನನ್ನ ಕೈಲಾದಷ್ಟು ಪ್ರಯತ್ನಿಸುತ್ತೇನೆ.

ಪ್ರಾರ್ಥನೆ : ದೇವರೇ ಇನ್ನು ಮುಂದಾದರೂ ನಾನು ಯೋಗ್ಯ ವ್ಯಕ್ತಿಯಾಗಿ ಬದುಕಲೂ, ಉತ್ತಮ ನಾಗರಿಕನಾಗಿ ಬಾಳಲೂ ಭಾರತದ ಹೆಮ್ಮೆಯ ಪುತ್ರನಾಗಿ ಬೆಳಗಲೂ ಬೇಕಾದ ಶಕ್ತಿ ಸಮರ್ಥ್ಯಗಳನ್ನು ಪ್ರಸಾದಿಸು"

- ಮುಂದುವರೆಯುವುದು



# ಮುಂಬರುವ ರಾಜ್ಯಮಟ್ಟದ ಕಾರ್ಯಕ್ರಮಗಳು

| ಕ್ರಮ ಸಂಖ್ಯೆ | ಸಮಾವೇಶ, ಶಿಬಿರ, ಸ್ಥಳ ಹಾಗೂ ದಿನಾಂಕ ವಿವರಗಳು | ಭಾಗವಹಿಸುವವರು |
|---|---|---|
| 1. | ಆಯುಕ್ತರುಗಳ, ಕಾರ್ಯದರ್ಶಿಗಳ, ಖಜಾಂಜಿಗಳ ರಾಜ್ಯಮಟ್ಟದ ಸಮಾವೇಶ, ತುಮಕೂರು, ದಿನಾಂಕ 31-10-2004 | ಜಿಲ್ಲಾ ಮುಖ್ಯ ಆಯುಕ್ತರು. ಜಿಲ್ಲಾ ಆಯುಕ್ತರುಗಳು (ಸ್ಕೌಟ್ಸ್, ಗೈಡ್ಸ್) ಮತ್ತು ಖಜಾಂಜಿ, ಕಾರ್ಯದರ್ಶಿ ಸಹ ಕಾರ್ಯದರ್ಶಿಗಳು) |
| 2. | ರೋವರ್ಸ್, ರೇಂಜರ್ಸ್ ಚಾರಣ/ಶಿಬಿರ ಶೆಟ್ಟಿಹಳ್ಳಿ, ಶಿವಮೊಗ್ಗ ದಿನಾಂಕ 3-11-04 ರಿಂದ 7-11-04 | ರೋವರ್ಸ್, ರೇಂಜರ್ಸ್, ರಾಷ್ಟ್ರಪತಿ ಸ್ಕೌಟ್ಸ್ ಗೈಡ್ಸ್‌ಗಳು |
| 3. | 57ನೇ ಹಿಮಾಲಯ ವೃಕ್ಷಮಣಿದಾರಕರ ಸಮಾವೇಶ. ಟೌನ್ ಹಾಲ್, ಉಡುಪಿ, 19-11-04 ರಿಂದ 21-11-04 | ಎಲ್ಲಾ ವಿಭಾಗದ ವೃಕ್ಷ ಮಣಿಧಾರಕರು |
| 4. | ರಾಜ್ಯ ಪುರಸ್ಕಾರ ಸ್ಕೌಟ್ಸ್ ಮತ್ತು ಗೈಡ್ಸ್ ಪೂರ್ವಭಾವಿ ತರಬೇತಿ ಶಿಬಿರ ಕೊಂಡಜ್ಜಿ ಶಿಬಿರ. ದಿನಾಂಕ 24-11-04 ರಿಂದ 28-11-04 | ತೃತೀಯ ಸೋಪಾನ ಪಡೆದ ಸ್ಕೌಟ್, ಗೈಡ್ಸ್‌ಗಳು |
| 5. | ತರಬೇತಿ ತಂಡದ ಸಮಾವೇಶ ಸಸ್ಯಚೇತನ ತರಬೇತಿ ಕೇಂದ್ರ, ಧಾರವಾಡ, ದಿನಾಂಕ 4-12-204 ರಿಂದ 6-12-04 | ನಾಯಕ ತರಬೇತುದಾರರು ಹಾಗೂ ಸಹಾಯಕ ನಾಯಕ ತರಬೇತುದಾರರು |
| 6. | ಆಯುಕ್ತರುಗಳ ಮೂಲ ತರಬೇತಿ ಶಿಬಿರ - ಕೊಂಡಜ್ಜಿ ಶಿಬಿರ ದಿನಾಂಕ 15-12-04 ರಿಂದ 19-12-04 | ಶಿಕ್ಷಣ ಇಲಾಖೆ ಅಧಿಕಾರಿಗಳು ವಕೀಲರು, ವೈದ್ಯರು, ಕೈಗಾರಿಕೋದ್ಯಮಿಗಳು ಗೃಹಿಣಿಯರು, ಸಮಾಜ ಸೇವಕರು. |
| 7. | 28ನೇ ಕಬ್ಸ್, ಬುಲ್‌ಬುಲ್ಸ್ ಉತ್ಸವ ಕ್ರೀಡಾಂಗಣ ಸ್ಕೌಟ್ ಗೈಡ್ ಭವನ, ಮಡಕೇರಿ ದಿನಾಂಕ 5-01-05 ರಿಂದ 9-1-05 | ಕಬ್ಸ್, ಬುಲ್‌ಬುಲ್ಸ್, ಯುನಿಟ್ ಲೀಡರ್ಸ್ |

# ಹಿಂದೆಂದೂ ಕಂಡು ಕೇಳರಿಯದ ವೈಭವ !



ಬಣ್ಣಬಣ್ಣದ ಮಿಶ್ರಿತ ಚಿತ್ತಾರಗಳು ಹಾಗೂ ಮಿಂಚುವ ಉಲ್ಲಾಸಮಯ ವಿನ್ಯಾಸಗಳು. ನೇಯ್ದು ನವಿರಾದ ಆಕೃತಿಗಳಿಂದ ಸ್ತ್ರೀಯ ಸೂಕ್ಷ್ಮ ಭಾವನೆಗಳಿಗೆ, ಕನಸುಗಳಿಗೆ ಸ್ಪಂದಿಸುವ ರಂಗುರಂಗಿನ ವೈವಿಧ್ಯಮಯ ರೇಷ್ಮೆ ಸೀರೆಗಳು. ಮಾಂತ್ರಿಕತೆಯಿಂದ ಮನಗೆಲ್ಲುವ ರೇಷ್ಮೆ ಸೀರೆಗಳು.



- ಕಾಂತಾ
- ವರ್ಣ ಚಿತ್ತಾರದ ಸೀರೆಗಳು
- ಬ್ರೊಕೇಡ್
- ಜ್ಯೊಡಿಯಾಕ್
- ಮಾಡರ್ನ್ ಪ್ರಿಂಟ್ಸ್
- ಗಂಡಭೇರುಂಡ
- ಜಮ್ದಾನಿ
- ಕಲಾಂಜಲಿ
- ಚೌಕಳಿ
- ಕಪ್ಪು ಬಿಳುಪು ಪ್ರಿಂಟ್ಸ್





## ಸೀರೆ Saree

ಪ್ರಿಯದರ್ಶಿನಿಯವರ ಉತ್ಪನ್ನ
ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ
ಕೈಮಗ್ಗದ ತವರು

ಎಲ್ಲಾ ಪ್ರಿಯದರ್ಶಿನಿ ಮಳಿಗೆಗಳಲ್ಲಿ ಲಭ್ಯ : **ಬೆಂಗಳೂರು:** • "ಶರ್ಟ್ ಶಾಪ್", ನಂ. ೧, ಟ್ಯಾಂಕ್ ರಸ್ತೆ, ಅಲಸೂರು, ಫೋನ್: ೨೫೫೭೫೪೨೪ • ನಂ. ೨೨, ಕಮರ್ಶಿಯಲ್ ಸ್ಟ್ರೀಟ್, ಫೋನ್: ೨೫೩೨೧೧೦೮ • ನಂ. ೨೪, ೫ನೇ ಮುಖ್ಯರಸ್ತೆ, ಜಯಮಹಲ್ ಎಕ್ಸ್‌ಟೆನ್‌ಶನ್, ಫೋನ್: ೨೩೫೩೫೭೪೭ • ಬಿಡಿಎ ಶಾಪಿಂಗ್ ಕಾಂಪ್ಲೆಕ್ಸ್, ಕೋರಮಂಗಲ, ಫೋನ್: ೨೫೬೩೧೭೫೮ • ೧೧ನೇ ಕ್ರಾಸ್, ಮಲ್ಲೇಶ್ವರಂ, ಫೋನ್: ೨೩೪೬೪೪೨೪, • ಕೆಎಚ್‌ಡಿಸಿ ಶಾಪಿಂಗ್ ಕಾಂಪ್ಲೆಕ್ಸ್, ಎಮ್.ಜಿ. ರಸ್ತೆ, ಫೋನ್: ೨೫೩೨೧೧೭೨ • ಸಫೀನಾ ಪ್ಲಾಝಾ, ಇನ್‌ಫೆಂಟ್ರಿ ರಸ್ತೆ, ಫೋನ್: ೨೫೩೨೧೫೪೩, • ಕಾರ್ಪೊರೇಶನ್ ಶಾಪಿಂಗ್ ಕಾಂಪ್ಲೆಕ್ಸ್, ಸುಭಾಷ್ ನಗರ, ಫೋನ್: ೨೨೨೬೯೪೭೬ • ಜಯನಗರ ಶಾಪಿಂಗ್ ಕಾಂಪ್ಲೆಕ್ಸ್, ೪ನೇ ಬ್ಲಾಕ್, ಫೋನ್: ೨೬೫೫೮೯೦೫ • ಮಹಾವೀರ ಶಾಪಿಂಗ್ ಕಾಂಪ್ಲೆಕ್ಸ್, ಕೆ.ಜಿ. ರಸ್ತೆ ಫೋನ್: ೨೨೨೬೨೮೩೬, • ರಲ್ಲಾರಾಮ್ ಬಿಲ್ಡಿಂಗ್, ಪಿ. ಕಾಳಿಂಗರಾವ್ ರಸ್ತೆ, ಫೋನ್: ೨೨೨೬೩೯೧೦೯, • ಇಎಸ್‌ಆಯ್ ಹಾಸ್ಪಿಟಲ್ ಹತ್ತಿರ, ರಾಜಾಜಿನಗರ, ಫೋನ್: ೨೩೪೦೦೦೧೦ **ಬೆಳಗಾವಿ :** • ಶಾನಬಾಗ್ ಚೇಂಬರ್, ಕಿರ್ಲೋಸ್ಕರ್ ರಸ್ತೆ, ಫೋನ್: ೯೫೮೩೧ ೨೪೬೪೮೧೨೬ **ಹುಬ್ಬಳ್ಳಿ** • ಎಚ್.ಡಿ.ಎಮ್.ಸಿ. ಕಾಂಪ್ಲೆಕ್ಸ್, ಇಂದಿರಾ ಗ್ಲಾಸ್ ಹೌಸ್ ಎದುರಿಗೆ, ಬಸ್ ನಿಲ್ದಾಣದ ಹತ್ತಿರ, ಫೋನ್: ೯೫೮೩೬ ೨೩೫೨೨೪ • ನ್ಯೂ ಕಾಟನ್ ಮಾರ್ಕೆಟ್, ಫೋನ್: ೯೫೮೩೬ ೨೩೫೨೦೬೦ **ಮಂಗಳೂರು:** • ಕಾರ್ನಾಡ್ ಸದಾಶಿವ ರಾವ್ ರಸ್ತೆ, ಫೋನ್: ೯೫೮೨೪ ೨೪೪೧೧೮೩ **ಮೈಸೂರು:** • ಮುನಸಿಪಲ್ ಶಾಪಿಂಗ್ ಕಾಂಪ್ಲೆಕ್ಸ್, ಧನ್ವಂತ್ರಿ ರಸ್ತೆ, ಫೋನ್: ೯೫೮೨೧ ೨೪೨೩೪೧೩ **ತುಮಕೂರು:** • ಬಿ.ಹೆಚ್. ರಸ್ತೆ, ಫೋನ್: ೯೫೮೧೬ ೨೨೭೩೧೧.



# 100 2007

A Hundred years of Promise
in 2007, Scouting will celebrate its Centenary

*God is not a power residing in the clouds,*
*God is an unseen residing within us.*
*A Life of sacrifice is the pinnacle of art and is full of true joy*
*I Recognise no are as my enemy on the face of the earth*

*- MAHATMA GANDHI*

Regd as News Paper (Magazine) No : **CPMG/KA/BGW-549/2003-05**
Permitted to Post under WPP System
Vide No.: **WPP.04** of SSP, BANGALORE WEST
Posted at: Bangalore City H.P.O. on 30-10-2004



ಕರ್ನಾಟಕ
ಸ್ಕೌಟ್ ಮತ್ತು ಗೈಡ್
ವಾರ್ತಾ ಪತ್ರಿಕೆ
KARNATAKA SCOUT & GUIDE
News Magazine

If not delivered please return to :

**EDITOR, Karnataka Scout & Guide**
State Headquarters, Prof. P. Sivashankar Circle
Kondajji Basappa Road, Fort
Bangalore - 560 002

BOOK-POST

THE STATE ... TARY
THE BHAR... UTS AND GUIDES
UTTAR P... STATE HEADQUARTERS
SCOUT ... MARKER
... LUCKNOW- 226 001

***Published for :*** The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.